# ತಿರುಮಲೆ - ತಿರುವತಿ ದೇವಸ್ಥಾನಗಳು, ತಿರುವತಿ.




# ಬರ್ಡ್

**ಸಾರ್ಥಕ ಸೇವೆಯ ಆದರ್ಶ :**

ಅಂಗವಿಕಲರ ಪುನರಾವಾಸ, ಪರಿಶೋಧನೆ, ಶಸ್ತ್ರಚಿಕಿತ್ಸೆಗಳ ಬಾಲಾಜಿ ಆಸ್ಪತ್ರೆಯು (ಬಾಲಾಜಿ ಇನ್ಸ್‌ಟಿಟ್ಯೂಟ್ ಆಫ್ ಸರ್ಜರಿ ರಿಸರ್ಚ್ ಅಂಡ್ ರಿಹ್ಯಾಬಿಲಿಟೇಷನ್ ಫಾರ್ ದಿ ಡಿಸೇಬಲ್ಡ್) ಮಾನವ ಸೇವೆಯ ಮೂಲಕ ಮಾಧವ ಸೇವೆಯನ್ನು ನಡೆಸುವ ತಿ ತಿ ದೇವಸ್ಥಾನಗಳ ಆದರ್ಶ ಪಂತಿಕೆಗೆ ಸಾಕ್ಷಿಯಾಗಿ ಅಂಗವಿಕಲರ ಸೇವೆಯಲ್ಲಿ ನಿರತವಾಗಿದೆ

1985 ರಲ್ಲಿ ಸ್ಥಾಪನೆಯಾದ ಬರ್ಡ್ ಸಂಸ್ಥೆ ಅಂಗ ರಚನಾ ಶಾಸ್ತ್ರ ಕ್ಷೇತ್ರದಲ್ಲಿ ಹಲವು ರೀತಿಯ ಹೊಸ ಹಾದಿಗಳನ್ನುಂಟುಮಾಡಿದೆ ಪೋಲಿಯೊ ಪೀಡಿತರು, ಜನ್ಮಾರಭ್ಯ ನ್ಯೂನತೆಗಳು, ಮಿದುಳ ಪಕ್ಷವಾತಗಳ ಮೂಲಕ ವಿಕಲಾಂಗರಾದ ರೋಗಿಗಳಿಗೆ ಉತ್ತಮವಾದ ಚಿಕಿತ್ಸೆ ಯನ್ನು ನೀಡುವ ಈ ಆಸ್ಪತ್ರೆ ಬಡ ಜನತೆಯ, ಅಗತ್ಯವಿದ್ದವರ ಸೇವೆಯಲ್ಲಿ ಸಮರ್ಪಿತವಾಗಿದೆ

## ಬರ್ಡ್‌ನ ಕೆಲವು ಸಾಧನೆಗಳು, ಅಗತ್ಯಗಳು, ಅನುಕೂಲಗಳು.

* ಬೆನ್ನು ಹುರಿಯ ಘಾಯದ ಚಿಕಿತ್ಸೆಯಲ್ಲಿ ಸದಾಸಿದ್ಧ ಯಂತ್ರೋಪಕರಣಗಳ ಬಳಕೆ
* ಎರಡು ಲಕ್ಷಕ್ಕೂ ಹೆಚ್ಚು ಮಂದಿಯ ಸಫಲ ಚಿಕಿತ್ಸೆಯಾಗಿದೆ
* 300 ಒಳರೋಗಿಗಳ ಹಾಸಿಗೆಗಳ ಚಿಕಿತ್ಸೆಗೆ ಅವಕಾಶವಿರುವ ಕೇಂದ್ರೀಕೃತ ಹವಾನಿಯಂತ್ರಿತ ಆಸ್ಪತ್ರೆ, ನಾಲ್ಕು ಶಸ್ತ್ರ ಚಿಕಿತ್ಸಾ ಕೋಣೆಗಳು
* ಕೃತಕ ಅಂಗಾಂಗಳ, ಆಧಾರಗಳ, ಆಲಂಬನಗಳ ಉಚಿತ ವಿತರಣೆ
* ಬರ್ಡ್‌ಗಾಗಿ ನೀಡುವ ಎಲ್ಲ ದಾನಗಳೂ ಆದಾಯಕರ ನಿಯಮದ 80 (ಜಿ) ಕಲವಿನ ಪ್ರಕಾರ ಆದಾಯ ಕರಮುಕ್ತವಾಗಿರುವುವು.
* ಐದು ಲಕ್ಷ ರೂಪಾಯಿ ಹಾಗೂ ಹೆಚ್ಚಿಗೆ ದಾನ ನೀಡಿದವರ ಹೆಸರಿನೊಡನೆ ಇರುವ ಭಾವಚಿತ್ರವನ್ನು ಬರ್ಡ್ ಆಸ್ಪತ್ರೆಯಲ್ಲಿ ಪ್ರದರ್ಶಿಸಲಾ ಗುವುದು
* ವರ್ಷಕ್ಕೆ ಒಮ್ಮೆ ಮೂರುದಿನ ದಾನಿಗಳ ಐದುಮಂದಿಗೆ ತಿರುಮಲೆಯಲ್ಲಿ ಉಚಿತದರ್ಶನ, ಸ್ವಾಮಿಯ ಆರತಿ ನೀಡಲಾಗುವುದು
* ಹತ್ತು ಲಕ್ಷ ರೂಗಳು ಹಾಗೂ ಹೆಚ್ಚಿನ ದಾನ ನೀಡುವವರ ಹೆಸರನ್ನು ಒಂದು ಕೋಣೆಗೆ ಇಡಲಾಗುವುದು
* ಶ್ರೀ ವೆಂಕಟೇಶ್ವರಸ್ವಾಮಿ ಹಾಗೂ ಶ್ರೀ ಪದ್ಮಾವತೀ ಅಮ್ಮನವರ ಬೆಳ್ಳಿಯ ಚಿತ್ರದ ಜ್ಞಾಪಿಕೆಯನ್ನು ಐದು ಲಕ್ಷ, ಹತ್ತು ಲಕ್ಷ ರೂಪಾಯಿಗಳ ದಾನಿಗಳಿಗೆ ನೀಡಲಾಗುವುದು

ದಾನಿಗಳು ಉದಾರವಾಗಿ ನೀಡುವ ದಾನಗಳನ್ನು ಬರ್ಡ್‌ನ ವಿವಿಧ ಯೋಜನೆಗಳಲ್ಲಿ ತೊಡಗಿಸಲಾಗುವುದು ಕೃತಕ ಅಂಗಾಂಗಳ ಉತ್ಪಾದನೆ ವಿತರಣೆಗೆ, ರೋಗಿಗಳ ಉಚಿತ ಭೋಜನ ರಿಯಾಯಿತಿ ದರಗಳ ಪ್ರಯಾಣ ವೆಚ್ಚಗಳಿಗೆ ಬಳಸಲಾಗುವುದು ದಾನಗಳನ ಕಾರ್ಯನಿರ್ವಹಣಾಧಿಕಾರಿ, ಬರ್ಡ್ ಟ್ರಸ್ಟ್, ತಿ ತಿ ದೇವಸ್ಥಾನಗಳು, ತಿರುಪತಿ - ಇವರ ಹೆಸರಿಗೆ ಕಳುಹಿಸಬಹುದು



**ಎಂ.ಕೆ.ಆರ್. ವಿನಾಯಕ್**, ಐ ಎ ಎಸ್

ಕಾರ್ಯನಿರ್ವಹಣಾಧಿಕಾರಿ,

ತಿ ತಿ ದೇವಸ್ಥಾನಗಳು, ತಿರುಪತಿ - 517 501


ಕಾನೆಯೆದ್ದು ಗೋವಿಂದನೆನ್ನಿ ನಮ್ಮ
ಸಂಜಿಪ ದುರಿತವು ದೂರವೆನ್ನಿ

ಅಸುರ ಸಂಹಾರಿಯೆನ್ನಿ ದಶಶಿರ ವೈರಿಯನ್ನಿ
ಶಿಶುವು ಮೊರೆಯಿಡಲು ರಕ್ಷಿಸಿದನೆನ್ನಿ
ಅಸುರನರಣ್ಯದಿ ಭಸ್ಮ ಮಾಡಲು
ವಸುಧೆಯೊಳ್ ನಾಟ್ಯವಾಡಿದನೆನ್ನಿ

ಬಲಿಯ ಬೇಡಿದನೆನ್ನಿ ಚೆಲುವ ವಾಮನನೆನ್ನಿ
ಲಲನೆಯ ಅಭಿಮಾನವ ಕಾಯ್ದನೆನ್ನಿ
ಕಲಿಯುಗದಲಿ ಬಂದ ಕೃಷ್ಣಾವತಾರನೆನ್ನಿ
ಸಲೆ ಪಾಂಡುಸುತರನ್ನು ಪಾಲಿಸಿದನೆನ್ನಿ

ಕರುಣಾಕರನೆನ್ನಿ ಕಪಟನಾಟಕನೆನ್ನಿ
ಕರಿರಾಜನನ್ನು ಕಾಯ್ದ ಕೃಷ್ಣನೆನ್ನಿ
ಪರಿಪರಿ ಪರಿಯಿಂದಲಿ ಭಕ್ತರ ಸಲಹುವ
ವರದ ಪುರಂದರ ವಿಠಲನೆನ್ನಿ

- ಶ್ರೀ ಪುರಂದರ ದಾಸರು.
JAGADISH

ಸಂದರ್ಶಿಸಿ ಆರಾಧಿಸಿ ಆನಂದಿಸಿ

# ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ದೇವಾಲಯ

## ಶ್ರೀನಿವಾಸ ಮಂಗಾಪುರ



# ವಾರ್ಷಿಕ ಬ್ರಹ್ಮೋತ್ಸವಗಳು

### 6-2-99 ರಿಂದ 15-2-99 ವರೆಗೆ

ಕಾರ್ಯಕ್ರಮ ವಿವರ

| ದಿನಾಂಕ | ವಾರ | ಹಗಲು | ರಾತ್ರಿ |
|---|---|---|---|
| 6-2-99 | ಶನಿವಾರ | | ಅಂಕುರಾರ್ಪಣೆ, ಸೇನಾಪತಿ ಉತ್ಸವ |
| 7-2-99 | ಭಾನುವಾರ | ಧ್ವಜಾರೋಹಣ | ದೊಡ್ಡಶೇಷವಾಹನ |
| 8-2-99 | ಸೋಮವಾರ | ಚಿಕ್ಕಶೇಷವಾಹನ | ಹಂಸವಾಹನ |
| 9-2-99 | ಮಂಗಳವಾರ | ಸಿಂಹವಾಹನ | ಮುತ್ತಿನಚಪ್ಪರವಾಹನ |
| 10-2-99 | ಬುಧವಾರ | ಕಲ್ಪವೃಕ್ಷವಾಹನ | ಸರ್ವಭೂಪಾಲವಾಹನ |
| 11-2-99 | ಗುರುವಾರ | ಪಲ್ಲಕ್ಕಿಯಲ್ಲಿ ಮೋಹಿನೀ ಅವತಾರ | ಗರುಡವಾಹನ |
| 12-2-99 | ಶುಕ್ರವಾರ | ಹನುಮಂತವಾಹನ<br>ಸಂಜೆ ವಸಂತೋತ್ಸವ | ಗಜವಾಹನ |
| 13-2-99 | ಶನಿವಾರ | ಸೂರ್ಯಪ್ರಭವಾಹನ | ಚಂದ್ರಪ್ರಭವಾಹನ |
| 14-2-99 | ಭಾನುವಾರ | ರಥೋತ್ಸವ | ಅಶ್ವವಾಹನ |
| 15-2-99 | ಸೋಮವಾರ | ತೀರ್ಥವಾರಿ, ಅವಭೃಥ, ಚಕ್ರಸ್ನಾನ | ಧ್ವಜಾವರೋಹಣ |

ಸೂಚನೆ : ಶ್ರೀನಿವಾಸಮಂಗಾಪುರ ತಿರುಪತಿಯಿಂದ ಪೀಲೇರು ಮದನಪಲ್ಲಿಗಳಿಗೆ ಹೋಗುವ ಮಾರ್ಗದಲ್ಲಿ ತಿರುಪತಿಯಿಂದ 12 ಕಿ ಮೀ ದೂರದಲ್ಲಿದೆ ತಿರುಪತಿಯಿಂದಲೂ ಚಂದ್ರಗಿರಿಯಿಂದಲೂ ಬಸ್‌ಸೌಕರ್ಯ ಉಂಟು ಬ್ರಹ್ಮೋತ್ಸವದ ದಿನಗಳಲ್ಲಿ ಧಾರ್ಮಿಕ ಸಾಂಸ್ಕೃತಿಕ ಕಾರ್ಯಕ್ರಮಗಳೂ ಇರುತ್ತವೆ

ನೀವೂ ಬನ್ನಿ. ತಿ.ತಿ.ದೇ. ನಿಮ್ಮವರನ್ನೂ ಕರೆತನ್ನಿ.




ವೇಂಕಟಾದ್ರಿ ಸಮಂಸ್ಥಾನಂ ಬ್ರಹ್ಮಾಂಡೇ ನಾಸ್ತಿ ಕಿಂಚನ
ವೇಂಕಟೇಶ ಸಮೋದೇವೋ ನ ಭೂತೋ ನ ಭವಿಷ್ಯತಿ

ಸಂಪುಟ - 29 ಜನವರಿ 1999 ಸಂಚಿಕೆ - 8



ರಕ್ಷಾಪತ್ರ ಆನಂದನಿಲಯ ವಿಮಾನದೊಡನೆ ಶ್ರೀವೆಂಕಟೇಶ್ವರಸ್ವಾಮಿಯ ವಿವಿಧಾಲಂಕಾರ

ಮಧ್ಯ ವಿಸ್ತೃತಿ · ಶ್ರೀವೆಂಕಟೇಶ್ವರಸ್ವಾಮಿ - ಪದ್ಮಾವತೀ ಪರಿಣಯ ಅಲಂಕಾರದಲ್ಲಿ



ಲೇಖನ/ ಜಾಹೀರಾತುಗಳಿಗೆ
ಮಿಕ್ಕ ವಿವರಗಳಿಗೆ
ಸಂಪಾದಕರು
ತಿರುಮಲೆ ತಿರುಪತಿ ದೇವಸ್ಥಾನಗಳು,
ತಿರುಪತಿ

ಸಪ್ತಗಿರಿಯ ಎಲ್ಲ ಭಾಷೆಯ ಪ್ರತಿಗಳೂ ಎಲ್ಲ ತಿ ತಿ ದೇ ವಿಚಾರಣಾಕೇಂದ್ರಗಳಲ್ಲಿ ದೊರೆಯುವುವು

**ಬಿಡಿ ಪ್ರತಿ 4-00**
**ವಾರ್ಷಿಕ ಚಂದಾ 48-00**

ಸಪ್ತಗಿರಿಯಲ್ಲಿ ಪ್ರಕಟವಾಗುವ ಲೇಖನಗಳಲ್ಲಿನ ಅಭಿಪ್ರಾಯಗಳು ಸಂಪಾದಕ ವರ್ಗದ, ಪತ್ರಿಕೆಯ, ಅಭಿಪ್ರಾಯಗಳೇ ಆಗಿರಬೇಕು ಎಂದಿಲ್ಲ - ಸಂ॥




'ಸಿಕ್ಕಿದರೆ ಹಿಡಿಯಿರಿ ಅವನನ್ನು ಚೆನ್ನಾಗಿ ತದುಕೋಣ' ಎಂದೊಬ್ಬ ಕವಿ ಆತ್ಮೀಯವಾಗಿ ಜನಕ್ಕೆ ಕರೆನೀಡುತ್ತಾರೆ. ಇಲ್ಲಿನ ಅವನು ಕಾಲಪುರುಷ ಕವಿಗೆ ಕೈಗೆ ಸಿಗದೆ ತಪ್ಪಿಸಿಕೊಳ್ಳುತ್ತ, ಕವಿಯನ್ನು ಛೇಡಿಸುತ್ತಲೇ ನಡೆಯುವ ಕುಚೇಷ್ಟೆಗಾರ ಎಂತಲೇ ಕವಿಯ ನಿರಂತರ ಹುಡುಕಾಟ

ಪ್ರಶ್ನೆ ಕೈಗೆ ಸಿಗದ ಕಾಲಪುರುಷ ಮಾತ್ರವೇ ಅಲ್ಲ ಅಳತೆಗಳವಡದ, ವಾಚಾಮಗೋಚರವಾದ ನಿರಂತರ ಸರಿಯುವ ಜಾರುವ ಹರಿಯುವ - ಕಾಲ - ಎಂಬ ಬ್ರಹ್ಮಪದಾರ್ಥದ್ದೂ ಹೌದು ಅದು ಬ್ರಹ್ಮದಂತೆಯೇ ಉಂಟೆಂದರೆ ಉಂಟು ಇಲ್ಲವೆಂದರೂ ಉಂಟು ಒಂದುರೀತಿಯ ವಿಪರ್ಯಾಸದಂತೆ, ವಿರೋಧಾಭಾಸದಂತೆ ಅಥವಾ ಎಲ್ಲವನ್ನೂ ಒಳಗೊಂಡ ಐಕ್ಯತೆಯಂತೆ, ಒಂದೇ ಸತ್ಯದಂತೆ, ನಾನಾ ಮುಖದಂತೆ, ದೇರೆಯಾದಂತೆ, ಇರುವುದಲ್ಲ - ಇಲ್ಲದಂತೆ

ಇಂತಹದೊಂದು ಚಿರಂಜೀವವನ್ನ ಅಳತೆಗಳವಡಿಸಲು ಪ್ರಯತ್ನಪಟ್ಟ ಮನುಷ್ಯನ ಸಾಹಸದ ವ್ಯಾಖ್ಯೆಗಾದರೂ ಏನು ಹೇಳಬೇಕು! ಎರಡೂ ಅಮೇಯಗಳೇ ಆದರೂ ಇಲ್ಲಿ ಈ ಭುವಿಯಲ್ಲಿ ಹಲವು ಸೀಮೆಗಳನ್ನು ಏರ್ಪಡಿಸಿಕೊಂಡು ಬದುಕು ದೂಡುವ ನಮ್ಮ ಮಧ್ಯೆ ಶಾಲಿವಾಹನ, ವಿಕ್ರಮ, ಫಸಲಿ, ಗಾಂಧಿ - ಮೊದಲಾಗಿ ಹಲವಾರು ಚಾಂದ್ರಮಾನ ಸೌರಮಾನಗಳು ಅವುಗಳ ಮಧ್ಯೆ ಗ್ರಿಗೋರಿಯನ್ ಎಂಬ ಜಗದ್ವ್ಯಾಪ್ತ ಕಾಲಗಣನೆಯೂ ಇದೆ. ಇದಕ್ಕೆ ಪ್ರಾಮುಖ್ಯತೆ ಬರುವುದಕ್ಕೆ ಕಾರಣವೆಂದರೆ ರೋಮಕರಿಗೂ ಮೊದಲಿನಿಂದ ಇದ್ದು ಕಾಲಾನುಗುಣವಾಗಿ ತಿದ್ದಾವಣೆ ಹೊಂದುತ್ತ ಪರಿಷ್ಕಾರ ಪಡೆಯುತ್ತ ಹೋದಂತೆಯೇ ಪುನರ್ನವೀಕರಣಗೊಂಡು ಪ್ರತಿದಿನವೂ ಪ್ರಸ್ತುತ ವಾಗುತ್ತ ನಡೆದಿರುವ ಒಂದು ದಿನಸೂಚಿ ಇದಾಗಿರುವುದು ಹಾಗಾಗಿಯೇ ಜಗತ್ತಿನ ಎಲ್ಲ ಕಡೆಯಲ್ಲಿಯೂ ಜನಪ್ರಿಯವಾದಂತೆಯೇ ಭಾರತೀಯರಲ್ಲಿಯೂ ಪ್ರಸಿದ್ಧವಾಗಿದೆ ಇಂತಲ್ಲಿ ಕ್ರಿ.ಶ.ದಲ್ಲಿನ ಎರಡನೆಯ ಸಾವಿರ ವರ್ಷವನ್ನು ತಲುಪಲು ಹೊರಟ ಕಡೆಯ ವರ್ಷ - ಕಡೆಯ ಮುನ್ನೂರ ಅರವತ್ತೈದು ದಿನಗಳು - ಎಣಿಕೆಯಾಗುವ ಹೊತ್ತು ಬಂದಿದೆ ಎಂದರೆ 1999 ಪ್ರವೇಶವಾಗುತ್ತಿದೆ.

ಇದೊಂದು ಶುಭ ಸಂದರ್ಭ ಎಂದು ಹೇಳಬೇಕೆ? ಎಲ್ಲ ಕ್ಷಣಗಳೂ ಶುಭವೆಂದೇ ಪರಿಗಣಿತವಾಗುತ್ತದೆ ಸನಾತನ ಧರ್ಮದ ದೀರ್ಘಾವಧಿಯಲ್ಲಿ ಎಂದಾಗ ಈ ಜನವರಿಯ ಮೊದಲಿ ದಿನದ ಮೊದಲ ಕ್ಷಣದ ವೈಶಿಷ್ಟ್ಯವಾದರೂ ಏನು? ಒಂದು ಸಂಕೇತಮಾತ್ರವೆಂದೇ ಸ್ವೀಕರಿಸಬೇಕು. ಉತ್ತರಾಯಣ ಪುಣ್ಯಕಾಲವೂ ಈ ಮಧ್ಯದಲ್ಲಿಯೇ ಬರಬೇಕಲ್ಲ, ಅದೂ ಒಂದು ಶುಭ ಸಂಕೇತವೇ ಅಲ್ಲವೇ ಎಂದರೆ ಉತ್ತರದ ಕಡೆಯ ಆಯನ ಆರಂಭವಾಗುವ ಪುಣ್ಯಕಾಲ ಎಂದು ಪ್ರಾಚೀನರು ಮೊದಲೇ ತೀರ್ಮಾನಿಸಿದ್ದಾರೆ ಅಲ್ಲಿನ ಆರಂಭಕ್ಕೆ ಶುಭವನ್ನು ಹಾರೈಸುವ ಹರಕೆಯಿದೆ! ಶುಭದತ್ತ ನಡೆಯುವ ಆಕಾಂಕ್ಷೆಯಿದೆಯಾಗಿ ಎರಡೂ ಒಂದರ ಸನಿಹ ಒಂದು ನಡೆಯುವುದರಿಂದಾಗಿ, ಆರ್ಷವಿಜ್ಞಾನದ ಉನ್ನತಿಕೆಯ ಕಾಂಕ್ಷೆಯ ಗಮನದತ್ತ ಮನ ಆಕರ್ಷಿತವಾಗುತ್ತದೆ ಎಂದು ಹೇಳಬರುತ್ತದೆ

ಹೊಸ ವರ್ಷವೂ ಸಂಕ್ರಾಂತಿಯೂ ಹದಿನೈದು ದಿನಗಳ ಅಂತರದಲ್ಲಿಯೇ ಬರುವ ಈ ಶುಭ ಸಂದರ್ಭದಲ್ಲಿ ಕತ್ತಲೆಯಿಂದ ಬೆಳಕಿಗೆ, ಒಳಿತಿನಿಂದ ಇನ್ನೂ ಒಳಿತಿಗೆ ಪಯಣಗೊಳ್ಳಲು ದಾರಿ ತೋರಿಸೆಂದು ಸ್ವಾಮಿಯಲ್ಲಿ ಬೇಡುವ

ಅಸತೋ ಮಾ ಸದ್ಗಮಯ
ತಮಸೋ ಮಾ ಜ್ಯೋತಿರ್ಗಮಯ
ಮೃತ್ಯೋರ್ಮಾ ಅಮೃತಂಗಮಯ

# ಆಕರ್ಷಕ ವೆಂಕಟರಮಣ

ಪ್ರೊ|| ಕೆ. ಆರ್. ನರಸಿಂಹನ್

ಗಂಗರಾಜರಾಳಿದ ನಾಡು ಕೋಲಾರ. ಕುವಳಾಲ - ಕೋಳಾಲ - ಕೋಲಾರಗಳೆಂಬ ಹೆಸರುಗಳಿಂದ ಇದು ಪ್ರಸಿದ್ಧವಾದದ್ದು. ಈ ನಾಡನ್ನು ಗಂಗರು ಕ್ರಿ.ಶ ಎರಡನೆ ಶತಮಾನದಿಂದ ಐದನೇ ಶತಮಾನದವರೆಗೆ ಆಳಿದರು ಆನಂತರ ಚೋಳರು, ಹೊಯ್ಸಳರು, ವಿಜಯನಗರದ ಅರಸರ ಕಾಲದಲ್ಲಿ ಇದೊಂದು ಪ್ರಮುಖ ಪಟ್ಟಣವಾಗಿತ್ತು ಕಲೆ-ಧರ್ಮ-ಸಂಸ್ಕೃತಿಗಳ ದೃಷ್ಟಿಯಿಂದ ವೈಭವವನ್ನು ಹೊಂದಿರುವ ಈ ಸ್ಥಳದಲ್ಲಿ ರಾಷ್ಟ್ರೀಯ ಸ್ಮಾರಕಗಳಿವೆ. ಇದೊಂದು ಪ್ರವಾಸಿ ಕ್ಷೇತ್ರವಾಗಿ ಅಭಿವೃದ್ಧಿ ಹೊಂದುತ್ತಿದೆ

ಶಾಕ್ತ-ಶೈವ ಪದ್ಧತಿಯನ್ನು ಪ್ರತಿಪಾದಿಸುವ ದೇವ ಮಂದಿರಗಳಿಂದ ಕೋಲಾರವು ಪ್ರಸಿದ್ಧಿ ಪಡೆದಿದೆ ಆದರೂ ಇಲ್ಲಿ ವೈಷ್ಣವ ಪೂಜಾ ಮಂದಿರಗಳಿಗೆ ಕೊರತೆಯೇನಿಲ್ಲ. ಈ ನಗರದಲ್ಲಿ ಧಾರ್ಮಿಕ ಸಮಸ್ವತೆಯು ಹಲವಾರು ಶತಮಾನಗಳಿಂದಲೂ ಇದೆ ಯಾದವರಾಯರೆಂಬುವರು ತಿರುಪತಿ - ತಿರುಮಲೆಗಳ ಸೇವಾ ಕಾರ್ಯದಲ್ಲಿ ಭಾಗವಹಿಸಿದ್ದಾರೆ ಇವರ ಕಾಲ ಹದಿಮೂರನೆ ಶತಮಾನ ಇವರಿಗೆ ಕೋಲಾರದ ಶೀಯ ಗಂಗಸದೇವನ ಮಗಳನ್ನು ವಿವಾಹ ಮಾಡಿಕೊಡಲಾಗಿತ್ತು ಹೀಗೆ ಕೋಲಾರಕ್ಕೂ ತಿರುಪತಿಗೂ ಸುಮಾರು ಎಂಟುನೂರು ವರ್ಷಗಳ ಹಿಂದಿನಿಂದಲೂ ನೆಂಟಸ್ತಿಕೆಯು ಸಾಗಿ ಬಂದಿದೆ

ಈ ಪಟ್ಟಣದ ಪಡುವಣ ದಿಕ್ಕಿನಲ್ಲಿ ಜೋಡಿ ದೇವಾಲಯವೊಂದಿದೆ ಇದರಲ್ಲೊಂದು ವೆಂಕಟರಮಣಸ್ವಾಮಿ ಆಲಯ, ಮತ್ತೊಂದು ನಂಜುಂಡೇಶ್ವರನ ದೇವಾಲಯ ಈ ಎರಡು ದೇವಾಲಯಗಳಿಗೂ ಹೊಂದಿಕೊಂಡಂತೆ ಒಂದು ವಿಶಾಲವಾದ ಹೊಂಡವಿದೆ ಇದಕ್ಕೆ "ನಾಗರಕುಂಟೆ" ಎಂಬ ಹೆಸರಿದ್ದು, ಇದರ ಮಧ್ಯದಲ್ಲಿ ಆಕರ್ಷಕವಾದ ಮಂಟಪವಿದೆ. ಎರಡು ದೇವಾಲಯಗಳಿಗೆ ಸಮನಾಗಿರುವ ಈ ನಾಗರಕುಂಟೆಯ ಶೈವ - ವೈಷ್ಣವ ಸಾಮರಸ್ಯಕ್ಕೆ ನಾಂದಿಯಂತಿದೆ. ಒಂದು ಕಾಲದಲ್ಲಿ ಪ್ರಸಿದ್ಧವಾದ ಪುಷ್ಕರಿಣಿಯಾಗಿದ್ದ ಇದು ಇಂದು ಸಾಕಷ್ಟು ಶಿಥಿಲವಾಗಿದೆ ಈ ದೇವಾಲಯಗಳು ಹಿಂದೊಮ್ಮೆ ಹೊಂದಿದ್ದ ವೈಭವಕ್ಕೆ ಸಾಕ್ಷಿಯಾಗಿ ನಿಂತಿದೆ

ನಾಗರಕುಂಟೆಯ ಪಕ್ಕದಲ್ಲಿ ಮೂಡಣಕ್ಕೆ ಬಾಗಿಲನ್ನು ಹೊಂದಿರುವುದು ವೆಂಕಟರಮಣಸ್ವಾಮಿಯ ದೇವಾಲಯ ಈ ದೇವಾಲಯದ ಸುತ್ತಲೂ ಪ್ರಾಕಾರವನ್ನು ಕಟ್ಟಲಾಗಿದೆ ದೇವಾಲಯದ ಮುಖ್ಯದ್ವಾರದಲ್ಲಿ ಶ್ರೀನಿವಾಸ ದೇವರ ಗಾರೆ ಹಾಗೂ ಬಣ್ಣಗಳಿಂದ ಬಿಡಿಸಲಾಗಿರುವ ವಿಗ್ರಹವಿದೆ ಒಳಗೆ ಅಡಿಯಿಡುತ್ತಿದ್ದಂತೆ ಗರುಡಗಂಬ, ಬಲಿಪೀರ, ಧ್ವಜಸ್ತಂಭ ಹಾಗೂ ಗರುಡರ ಮಂಟಪಗಳಿವೆ. ಇಲ್ಲಿನ ಧ್ವಜಸ್ತಂಭಕ್ಕೆ ಹಿತ್ತಾಳೆಯ ಹೊದಿಕೆಯನ್ನು ಹೊದಿಸಲಾಗಿದೆ ಒಳಾವರಣದಲ್ಲಿ ಸಭಾಮಂಟಪ, ಕಲ್ಯಾಣ ಮಂಟಪಗಳಿವೆ ಪಟ್ಟಣದ ಪ್ರಮುಖ ಧಾರ್ಮಿಕ - ಸಾಂಸ್ಕೃತಿಕ ಸಮಾರಂಭಗಳು ಇಲ್ಲಿ ನಡೆಯುತ್ತವೆ ಸುತ್ತಲೂ ವಾಸಕ್ಕೆ ಅನುಕೂಲವಾಗಿ ಪರಿವರ್ತಿಸಿಕೊಂಡಿರುವ ಕೊರಡಿಗಳಿವೆ ದೇವಾಲಯದ ಪರಿಚಾರಕರು, ಅರ್ಚಕರು ಇಲ್ಲಿ ವಾಸವಾಗಿದ್ದಾರೆ ಹಾಸುಗಲ್ಲಿನಿಂದ ಕೂಡಿರುವ ಅಂಗಳವು ಶುಭ್ರವಾಗಿಯೂ, ವಿಶಾಲವಾಗಿಯೂ ಇದೆ. ಇಲ್ಲಿನ ಮೂಲೆಯಲ್ಲಿರುವ ಅಶ್ವತ್ಥ ವೃಕ್ಷವು ತನ್ನ ಹಳಮೆಯನ್ನು ಸಾರುತ್ತಿದೆ ರಾಶಿಯಾಗಿರುವ ನಾಗರಕಲ್ಲುಗಳು, ಶಿವಲಿಂಗ ಇದರ ಅಡಿಯಲ್ಲಿವೆ ಈ ಸಮೂಹದಲ್ಲಿ "ಗ್ರಾನೈಟ್" ಶಿಲೆಯ ಶಿಲ್ಪವೊಂದಿದೆ ಸುಮಾರು ನಾಲ್ಕುವರೆ ಅಡಿ ಎತ್ತರವಿರುವ ಈ ಶಿಲ್ಪವು ವೈಷ್ಣವ ಮೂರ್ತಿಯೆಂಬುದನ್ನು ತನ್ನ ಮುರುಕಾದ ಆಯುಧಗಳಿಂದ ಪ್ರತಿಪಾದಿಸುತ್ತಿದೆ ಆದರೆ ಶಿಥಿಲವಾಗಿರುವ ಈ ಶಿಲ್ಪದಿಂದ ಸ್ಪಷ್ಟವಾಗಿ ಮೂರ್ತಿ ಶಿಲ್ಪದ ನೆಲೆಯನ್ನು ಗುರುತಿಸಲಾಗದು

ಇಂತಹ ವಾತಾವರಣದಲ್ಲಿ, ನಿರ್ಮಲವಾದ ಪರಿಸರದಲ್ಲಿ ಗರ್ಭಗೃಹ, ಸುಖನಾಸಿ, ನವರಂಗ



# ಗೋದೆಯ ಗೀತೆ

ಕಂದಾಡೈ ಕೇಶವನ್

ಧನುರ್ಮಾಸ ಬಂದರೆ ದಿನವೊಂದಕ್ಕೆ ಒಂದರಂತೆ ಗೋದೆಯು ಹಾಡಿದ 'ತಿರುಪ್ಪಾವೈ' ಪಾಶುರಗಳನ್ನು ಹೃದಯ ತುಂಬಿಹಾಡುವುದು ವಾಡಿಕೆ ಮೂವತ್ತು ದಿನಗಳು ಎಲ್ಲಾ ವೈಷ್ಣವ ದೇವಸ್ಥಾನಗಳಲ್ಲಿ, ಮಠಗಳಲ್ಲಿ ಪ್ರವಚನ, ಕಾಲಕ್ಷೇಪ, ಹಲವಾರು ವಿದ್ವಾಂಸರಿಂದ ವ್ಯಾಖ್ಯಾನಗಳ್ಳು ನಡೆದು ಬಂದ ಪದ್ಧತಿ ಅಂದಿನಿಂದ ಇಂದಿನವರೆಗೂ ಆಚರಿಸುವ ಸಂಪ್ರದಾಯ ತಿರುಪ್ಪಾವೈಯನ್ನು ಹಾಡಿದವಳು ವೇಯರ್ ಕುಲ ವಿಳಕ್ಕು ಪುದುವೈನಗರ್ ಆಂಡಾಳ್ ಅವಳಾದದರೋ ಶೂಡಿಕ್ಕೊಡುತ್ತನಾಚ್ಚಿಯಾರ್, ಶ್ರೀ ಆಂಡಾಳ್ ಸಾಕ್ಷಾತ್ ಲಕ್ಷ್ಮೀದೇವಿಯು ಭೂಲೋಕಕ್ಕೆಬಂದು ವಿಷ್ಣುಚಿತ್ತರ ಮಗಳಾಗಿ ಭಗವಂತನನ್ನು ಪಡೆಯಲು ಭಕ್ತಿ ಭಾವದಿಂದ ತಾನು ರಚಿಸಿ ಸಮರ್ಪಿಸಿದ ಪಾಮಾಲೈ (ಶ್ರೀ ಸೂಕ್ತಿಗಳ ಮಾಲೆ) ಅಂದರೆ ನಮ್ಮನ್ನು ಅನುಗ್ರಹಿಸಲು ತಾನು ಬರೆದ ತಿರುಪ್ಪಾವೈ ನಮಗೆ ನೀಡಿ ತನಗಾಗಿ ಪುಷ್ಪಮಾಲೆಯನ್ನು ತಾನು ಮೊದಲು ಮುಡಿದು ಮಾಧವನಿಗೆ ತರುವಾಯ ಮುಡಿಸಿದ ಶುರುಂಬಾರ್ ಕುಪಲ್‌ಗೋದೈ ಅದಕ್ಕಾಗಿಯೇ ಈ ಗೋದಾದೇವಿಯನ್ನು ನಾವು ಕೊಂಡಾಡುವುದು-

ನಮಕ್ಕೇ ಪಾಮಾಲೈ
ಪಾಡಿ ಕೊಡುತ್ತಾಳ್ ತನಕ್ಕಾಹ
ಮಣಿವಣ್ಣನುಕ್ಕು ಪೂಮಾಲೈ
ಶೂಡಿಕೊಡುತ್ತಾಳ್
(ಅವಳೇ ಶೂಡಿಕ್ಕೊಡುತ್ತ ನಾಚ್ಚಿಯಾರ್)

ಪುಂಡರೀಕಾಕ್ಷರು ಹೃದಯತುಂಬಿ ಹೊಗಳಿದರು ಈ ತಿರುಪ್ಪಾವೈ ಹಾಡಿದ ಶೆಲ್ವಿಯನ್ನು - ಹಾಡಿನ ಮಾಲೆ ನಮಗಾಗಿ ಹೂವಿನ ಮಾಲೆ ತನಗಾಗಿ ಎಂದು

## ಜನನ

ಸ್ವಾಮಿ ಶ್ರೀಮನ್ನಿಗಮಾಂತ ಮಹಾದೇಶಿಕರು ತಮ್ಮ ಶ್ರೀ ಗೋದಾಸ್ತುತಿಯ ಮೊದಲನೆಯ ಮಂಗಳ ಶ್ಲೋಕಗಳಲ್ಲಿ ಸ್ತುತಿಸುವರು ಹೀಗೆಂದು-

ಶ್ರೀ ವಿಷ್ಣುಚಿತ್ತಕುಲ-ನಂದನ-ಕಲ್ಪವಲ್ಲೀಂ
ಶ್ರೀರಂಗರಾಜ-ಹರಿಚಂದನ-ಯೋಗ-ದೃಶ್ಯಾಂ
ಸಾಕ್ಷಾತ್‌ಕ್ಷಮಾಂಕರುಣಯಾ
ಕಮಲಾಮಿತಾನ್ಯಾಂ
ಗೋದಾಮನನ್ಯ ಶರಣಃ ಶರಣಂ ಪ್ರಪದ್ಯೇ

ಪರಮ ಭಾಗವತರಾದ ಪರಮಾತ್ಮನನ್ನು ಸತತವಾಗಿ ನೆನೆಯುವ ಪರಮಹಂಸ ಸ್ವರೂಪವಾದ ಆಳ್ವಾರಗಳಲ್ಲಿ ಶ್ರೇಷ್ಠರಾದ ಶ್ರೀವಿಷ್ಣುಚಿತ್ತರನ್ನು (ಪೆರಿಯಾಳ್ವಾರ್‌ರನ್ನು) ನಾವು ತಿರುಪ್ಪಲ್ಲಾಂಡು ಪಾಶುರಗಳ ಮೂಲಕ ಕೇಳಿದ್ದೇವೆ ಅವರು ನೆಲೆಸಿದ್ದ ಭೂಮಿ ಶ್ರೀವಿಲ್ಲಿಪುತ್ತೂರು. ಆ ವಿಷ್ಣುಚಿತ್ತರ ವಂಶವೆಂಬ ನಂದನವನಕ್ಕೆ ಕಲ್ಪವೃಕ್ಷ ಲತೆಯಂತೆ ಇವಳು ಸ್ವಾಭಾವಿಕವಾಗಿ ಬೇಡಿದ ವರಗಳನ್ನು ನೀಡುವ ಇವಳು ಕಲ್ಪಲತೆ (ಕಲ್ಪವೃಕ್ಷ) ಕ್ಷಮಾಸ್ವರೂಪಳು ಕರುಣಾಮಯಿ ಪುರುಷಕಾರ ಸ್ವರೂಪಳು ಅಂತಹವಳು ಶ್ರೀವಿಲ್ಲಿಪುತ್ತೂರಿನಲ್ಲಿ ತುಲಸೀವನದಲ್ಲಿ ಪೆರಿಯಾಳ್ವಾರರಿಗೆ ಜನಕಮಹಾರಾಜನಿಗೆ ಸೀತೆ ಸಿಕ್ಕಿದಂತೆ ಗೋದಾದೇವಿ ದೊರಕಿದಳು ಶ್ರೀವಿಲ್ಲಿಪುತ್ತೂರಿನಲ್ಲಿ ವಿಷ್ಣುಚಿತ್ತರು ತಮ್ಮ ಮಗಳಿಗೆ ಬಾಲ್ಯದಿಂದಲೂ ಭಾಗವತ, ರಾಮಾಯಣ ಪುರಾಣಗಳ ಕಥಾಶ್ರವಣ ಮಾಡಿಸುತ್ತಿದ್ದರು 'ಪತಿತ ಪಾವನ ಪುಂಡರೀಕಾಕ್ಷನ ಪುಣ್ಯಚರಿತೆಯನ್ನು ದಿನದಿನವೂ ಕೇಳಿ ಗೋದೆ ಶ್ರೀಕೃಷ್ಣ ಗೋಪೀವಿಲಾಸ ಮೂರ್ತಿ ಧ್ಯಾನವು ಮುಕ್ತಿಮಾರ್ಗಕ್ಕೆ ಸೋಪಾನವೆಂದು ಅರಿತಳು ಕೃಷ್ಣಕಥೆ ಆಕೆಗೆ ಬಹು ಪ್ರಿಯವಾಯಿತು ಗೋಕುಲದ ಸಮೃದ್ಧಿ, ಗೋಪಾಲಕರ ಗೋಧನಸಂಪತ್ತಿ ಗೋಪಿಯರ ಭಗವದ್ಭಕ್ತಿ ವ್ರತಜಪತಪ ಶತಕ್ರತುಗಳಿಗಿಂತ ಮಿಗಿಲೆಂದು ಆಕೆ ಅರಿತಳು ರತಿನಾಯಕನ ಪಿತನ ಕಥೆ ಕಿವಿಗೆ ಇಂಪಾಯಿತು ಅವನ ನಾಮಸ್ಮರಣೆ ಮತಿಗೆ ಮುದಕೊಟ್ಟಿತು ಯದುಕುಲೇಶನ ವೇಣುಗಾನ ಸದಾ ಅವಳಲ್ಲಿ ಸುಧಾಪಾನ ಹೃದಯಲ್ಲಿ ನೆಲಸಿ ಸುಮ್ಮಾನವಾಯಿತು ವಿಷ್ಣುಚಿತ್ತರು ನಿತ್ಯವೂ ದೇವರಿಗೆ ತಾವು ಬೆಳೆಸಿದ ತೋಟದಲ್ಲಿ ಹೂಕಿತ್ತು ಮಾಲೆಯನ್ನು ಕಟ್ಟಿ ತಮ್ಮ ಆರಾಧ್ಯದೇವರಾದ ರಂಗನಾಥನಿಗೆ ಅರ್ಪಿಸುವ ಪದ್ಧತಿ ದೇವರಿಗೆ ನಿತ್ಯವೂ ಕಟ್ಟಿಡುತ್ತಿದ್ದ ಹೂಮಾಲೆಯನ್ನು ಗೋದೆ ಕುತೂಹಲದಿಂದ ತಾನು ಮುಡಿದು ಆನಂದಿಸಿ ತೆಗೆದಿಡುತ್ತಿದ್ದ ರೂಢಿ ಮುಂದುವರೆಯಿತು ಹಲವಾರು ದಿನ ಈಗೆಯೇ ನಡೆದುಬಂತು ಹೀಗಿರಲು ಒಂದು ದಿನ ವಿಷ್ಣುಚಿತ್ತರು ಈ ದೃಶ್ಯವನ್ನು ಕಣ್ಣಾರೆ ಕಂಡು ದೇವರಿಗೆ ಅಪಚಾರವಾಯಿತೆಂದು ತಿಳಿದು ಆದಿನ ಆ ಪುಷ್ಪಮಾಲೆಯನ್ನು ದೇವಸ್ಥಾನಕ್ಕೆ ಕೊಂಡೊಯ್ಯಲಿಲ್ಲ ಆ ದಿನ ರಾತ್ರಿ ವಟಪತ್ರಶಾಯಿ ಶ್ರೀರಂಗನಾಥನು ವಿಷ್ಣುಚಿತ್ತರಿಗೆ ಸ್ವಪ್ನದಲ್ಲಿ ಕಾಣಿಸಿಕೊಂಡು 'ಗೋದೆಯು ಮುಡಿದ ಹೂವೇ ತನಗೆ ಪ್ರೀತಿ' ಎಂಬುವುದಾಗಿ ಹೇಳಲು ಮಾರನೆಯ ದಿನದಿಂದ ಗೋದೆ ಮುಡಿದ ಹೂವನ್ನೇ ಸ್ವಾಮಿಗೆ ಸಮರ್ಪಣೆಮಾಡುತ್ತಿದ್ದರು ಅಂತೆಯೇ ಅವಳು ಶೂಡಿಕ್ಕುಡುತ್ತನಾಚ್ಚಿಯಾರ್ ಆದಳು ವಿಷ್ಣುಚಿತ್ತರು ಮಗಳ ಆಸೆಯಂತೆ ೧೦೮ ದಿವ್ಯಕ್ಷೇತ್ರಗಳ ಪರಮಾತ್ಮನ ದಿವ್ಯ ಮಂಗಳ ರೂಪಗಳನ್ನು ವರ್ಣಿಸಿದಾಗ ಆಕೆ ಶ್ರೀರಂಗದ ಶ್ರೀರಂಗನಾಥನಲ್ಲಿ ಪ್ರೇಮ ಭರಿತಳಾದಳು ಅವನನ್ನೇ ಪಡೆಯದೇಕೆಂಬ ಆಸೆಯನ್ನು ತೋರ್ಪಡಿಸಿದಳು ತನ್ನ ಮನದ ಆಸೆ ಆಕಾಂಕ್ಷೆಗಳನ್ನು ತಿಳಿಸಲು "ನಾಚ್ಚಿಯಾರ್ ತಿರುಮೊಳಿ" ಎಂಬುವ ೧೪೩ ಪಾಶುರಗಳನ್ನು ರಚಿಸಿ ತುಂಬುಮನದಿಂದ ಹಾಡಿದಳು

ಮಾಸಗಳಲ್ಲಿ ಮಾರ್ಗಶೀರ್ಷ ಮಾಸವು (ಧನುರ್ಮಾಸವು) ಸತ್ವ ಪ್ರಧಾನವಾದ ತಿಂಗಳೆಂದು ಶ್ರೀಕೃಷ್ಣನು ಗೀತೆಯಲ್ಲಿ ತಿಳಿಸಿರುವಂತೆ ಧನುರ್ಮಾಸದಲ್ಲಿ ಆಚರಿಸುವ ಜಪ ತಪ ಧ್ಯಾನ ದಾನ ಉತ್ಸವಗಳು ಪರಮಾತ್ಮನಿಗೆ ಹೆಚ್ಚು ಪ್ರೀತಿ ಎಂಬುವುದಾಗಿ ಧನುರ್ಮಾಸದ ಮಹಾತ್ಮವು ಸ್ಕಾಂದಪುರಾಣದಲ್ಲೂ ಪದ್ಮ



ಪುರಾಣದಲ್ಲೂ ಬಹಳ ಅತಿಶಯವಾಗಿ ವರ್ಣಿತವಾಗಿದೆ ಒಂದು ದಿನದಲ್ಲಿ ಬ್ರಾಹ್ಮೀ ಮುಹೂರ್ತವು ಇರುವಂತೆ ಒಂದು ವರುಷದಲ್ಲಿ ಮಾರ್ಗಶೀರ್ಷ ಮಾಸವು ಬ್ರಾಹ್ಮ ಮುಹೂರ್ತ ಆ ಕಾಲದಲ್ಲೇ ಹಿಂದೆ ಗೋಪಿಯರು ಶ್ರೀಕೃಷ್ಣನನ್ನು ಪಡೆಯಲು ಆ ವ್ರತ (ಕಾತ್ಯಾಯನೀವ್ರತವನ್ನು) ಆಚರಿಸಿ ಶ್ರೀಕೃಷ್ಣನ ಸಾನ್ನಿಧ್ಯ ಪಡೆದರು

ಹೇಮಂತೇ ಪ್ರಥಮೇ ಮಾಸಿ
ನಂದ ವ್ರಜಕುಮಾರಿಕಾಃ
ಚೇರುರ್ಹವಿಷ್ಯಂ ಭುಂಜಾನಾಃ
ಕಾತ್ಯಾಯನ್ಯರ್ಚನ ವ್ರತಂ

ಆದ್ದರಿಂದ ನೀನೂ ಧನುರ್ಮಾಸ ವ್ರತವನ್ನು ಆಚರಿಸು ಎಂದು ಗೋದೆಗೆ ವಿಷ್ಣುಚಿತ್ತರು ಹೇಳಿದರು ಗೋದೆಯು ಆಚರಿಸಿದ ವ್ರತ ಶ್ರೇಷ್ಠವಾಯಿತು

## ಸಿರಿನೋಂಪಿ

ನಂದಗೋಕುಲದಲ್ಲಿದ್ದ ಗೋಪಿಯರನ್ನು ಪ್ರತಿದಿನ ಬ್ರಾಹ್ಮೀ ಮುಹೂರ್ತದಲ್ಲಿ ಕೂಡಿ ಆಚರಿಸಿದ ಕಾತ್ಯಾಯನೀವ್ರತವನ್ನು ಸ್ಮರಿಸಿಕೊಂಡು ಗೋದೆಯು ತಾನೂ ಶ್ರೀವಿಲ್ಲಿಪುತ್ತೂರಿನ ಸ್ನೇಹಿತೆಯರ ಮನೆ ಮನೆಗೆ ಹೋಗಿ ಅವರನ್ನು ಎಬ್ಬಿಸಿ ಹಾಡಿದ ಹೃದಯಗೀತೆಯೇ ತಿರುಪ್ಪಾವೈ - ಹೀಗೆ ಮೊದಲನೆಯ ಪಾಶುರ

ಮಾರ್ಗಳಿತ್ತಿಂಗಳ್ ಮದಿನಿರೈಂದ ನನ್ನಾಳಾಲ್
ನೀರಾಡಪ್ಪೋದುವೀರ್ ಪೋದು ಮಿನೋ ನೇರಿಳೈಮಾರ್
.. ಪಡಿಂದೇಲೋರೆಂಪಾವಾಯ್

ಮೊದಲನೆಯ ಪಾಶುರದಿಂದಲೇ ಗೋದೆಯ ಗೀತೆಗೆ ತಿರುಪ್ಪಾವೈ ಎಂಬುವ ಹೆಸರು ಬಂದಿದೆ ಇಲ್ಲಿ ಮಾ ಎಂದರೆ ಲಕ್ಷ್ಮೀವಾಚಕ ಶ್ರೀ ಎಂಬುವುದು ಅದರ ಅರ್ಥ ತಮಿಳಿನಲ್ಲಿ ಶ್ರೀಕಾರಕ್ಕೆ ತಿರು ಎಂಬುವುದಾಗಿ ಅರ್ಥ ಕೊಡಬಹುದು ಕೊನೆಯ ಪದ ಎಂಪಾವಾಯ್ - ನಮ್ಮ ವ್ರತ ಅದ್ವಿತೀಯವಾದುದು ಮಾ (ತಿರು) ಎಂದರೆ ಮಹಾಲಕ್ಷ್ಮಿಯು ಆಚರಿಸಿದ ಪಾವೈ (ವ್ರತ) ತಿರುಪ್ಪಾವೈ ಎಂದರೆ ಸಿರಿನೋಂಪಿ ಈ ಗ್ರಂಥವು ವೇದ ಪ್ರತಿಪಾದ್ಯವಾದ ರಹಸ್ಯಾರ್ಥಗಳನ್ನು ತಿಳಿಸುತ್ತದೆ (ವೇದಮನೈತ್ತುಕ್ಕಂ ವಿತ್ತು) ಪಾಪರಾಶಿಗಳನ್ನು ಹೋಗಲಾಡಿಸುತ್ತದೆ-ಪಾತಕಂಗಳ್ತೀರ್ಕುಂ ಪರಮನಡಿಕಾಟ್ಟುಂ - ಮೋಕ್ಷದ ಹಾದಿಯನ್ನು ತೋರಿಸುತ್ತದೆ ಶ್ರೀದೇವಿ ಗೋದೆಯಾಗಿ ಅವತಾರಮಾಡಿ ಪರಮಾತ್ಮನ ಪರತತ್ವವನ್ನು ಬೋಧಿಸಿ ನಮಗೆ ಬಹು ಉಪಕಾರಮಾಡಿದ್ದಾಳೆ ಈ ಸಿರಿನೋಂಪಿಯ ನಿಯಮಗಳನ್ನು ಎರಡನೆಯ ಪಾಶುರದಲ್ಲಿ ತಿಳಿಸಿದ್ದಾಳೆ ತುಪ್ಪಹಾಲನ್ನು ತಿನ್ನೆವು. ಬ್ರಾಹ್ಮೀಮುಹೂರ್ತದಲ್ಲಿ ಸ್ನಾನ ಮಾಡುವೆವು. ಪರಮಾತ್ಮನನ್ನು ನೆನೆಯುವೆವು - ಇತ್ಯಾದಿ ಮೂರನೆಯ ಪಾಶುರದಲ್ಲಿ ಶ್ರೀಹರಿಯನ್ನು ಸ್ತುತಿಸಿದರೆ ಸರ್ವಪಾಪನಾಶ ಅತಿವೃಷ್ಟಿ ಅನಾವೃಷ್ಟಿ ಬಾಧೆಯಿಲ್ಲ ನಾಡೆಲ್ಲಾ ಸುಭಿಕ್ಷವಾಗಿರುತ್ತೆ ನಾಲ್ಕನೆ ಪಾಶುರ ಭಾಗವತರ ಮಹಾತ್ಮೆ ಸಂಚಿತ ಆಗಾಮಿ ಪ್ರಾರಬ್ಧ ಕರ್ಮಗಳು ದಾಮೋದರನ ನಾಮದ ಪ್ರಭಾವದಿಂದ ಅಳಿಯುತ್ತವೆ ಎಂಬುವುದರ ಧ್ವನ್ಯಾರ್ಥ ಮಾಯನೈ ವಡಮಧುರೈ ಮೈಂದನೈ ಎಂಬುವ ಪಾಶುರದಲ್ಲಿ ಶ್ರೀಕೃಷ್ಣನ ಲೀಲಾವಿಭೂತಿಗಳ ವರ್ಣನೆ ಅವನ್ನೇ ಶರಣ್ಯ ವಸ್ತುವೆಂದು ಸೇವಿಸಿ ವಾಯಿನಾಲ್ ಪಾಡಿ ಮನಸ್ಸಿನಲ್ಲಿ ಧ್ಯಾನಮಾಡಿದರೆ ಎಲ್ಲಾ ಕರ್ಮಗಳ ನಾಶ ಮೋಕ್ಷಪ್ರಾಪ್ತಿ ನಿದ್ದೆಮಾಡುತ್ತಿರುವ ಗೋಪಿಯರನ್ನು ಎಬ್ಬಿಸಿ ಗರುಡಾರೂಢನಾದ ಹರಿಯನ್ನು ಮುನಿಗಳು ಯೋಗಿಗಳು ಸ್ತುತಿಸುವ ಪ್ರಾಧಃಕಾಲ

ವರ್ಣನೆ, ಇಲ್ಲೂ ಗೋಪಿಕಾನಾಯಕಿಯನ್ನು ಎಬ್ಬಿಸುವ ಪಾಶುರ ನಂದಗೋಕುಲದಲ್ಲಿ ಕೇಳಿ ಬರುವ ಭಾರದ್ವಾಜ ಪಕ್ಷಿಯ ಕಿಲಕಿಲ ರವ ನಾರಾಯಣ ಕೇಶವ ಎಂಬುವ ನಾಮಗಳಿಂದ ಕರೆಯುತ್ತಾ ಮೊಸರು ಕಡೆಯುವ ಗೋಪಕನ್ಯೆಯರ ನೈಜ ಚಿತ್ರಣ ಜಡಸ್ವರೂಪವಾದ ಎಮ್ಮೆಗಳೂ ಕೂಡ ಪೂರ್ವದಲ್ಲಿ ದೆಳಗಾಗಲು ತಾವೇ ಎದ್ದಿರುವಾಗ ನಿನ್ನನ್ನು ಬಿಟ್ಟು ಮಿಕ್ಕ ಗೋಪಿಯರೆಲ್ಲಾ ಸ್ನಾನಕ್ಕಾಗಿ ಬಂದಿರುವಾಗ ನೀನು ಮಾತ್ರ ಮಲಗಿರುವಿ ಎಂದು ಸಖಿಯೊಬ್ಬಳನ್ನು ಎಬ್ಬಿಸುವ ಸುಪ್ರಭಾತ ಆದಿಪಾಶುರ

ತೂಮ

ಣಿಮಾಡತ್ತುಚ್ಚುತ್ತುಂ ವಿಳಕ್ಕೆರಿಯ ಪಾಶುರ - ಕೃಷ್ಣನನ್ನೇ ಸ್ಮರಿಸಿ ಅವನ ಪ್ರೇಮದಲ್ಲಿ ಮಲಗಿರುವ ಗೋಪಿಯನ್ನು ಎಬ್ಬಿಸುವ ಪಾಶುರ ಗೋಪಿಯ ರತ್ನ ಖಚಿತ ತಿರುಮಾಳಿಗೆಯಲ್ಲಿ ಸುತ್ತಲೂ ದೀಪ ಉರಿಯುತ್ತಿರಲು ದೀಪವೇ ನಾರಾಯಣ, ಆದರ ದೆಳಕು (ಜ್ಯೋತಿ) ಲಕ್ಷ್ಮೀ, ಸದಾ ಭಗವಂತನನ್ನು ಕಾಣಬೇಕೆಂಬ ಭಾವದೊಡನೆ ನಂದಾದೀಪ ವಿಷ್ಣು ಸಹಸ್ರನಾಮದ ಪರನ•ನಾಮುಂ ಪಲವೂ ನವಿನ್ರು ಎಂಬುವುದರ ಅರ್ಥ

ನೋತ್ತುಂ ಚ್ಚುವರ್ಕಂ - ಪೇಯಳ್ವಾರ್ ಸುಪ್ರಭಾತ ಇಲ್ಲಿ ಭೂಮ ವಿದ್ಯೆ ಭಗವತ್ ಸಂಶ್ಲೇಷಾನುಭಾವ

ತ್ತು ಕವಲೈಗಳ್ ಪಲಕರಂದ -ಭೂತತ್ತಾಳ್ವಾರ್ ಸುಪ್ರಭಾತ ಇಲ್ಲಿ ನೀಲ ಮೇಘ ಶ್ಯಾಮನ ನಾಮಸ್ತುತಿ• ಕೃಷ್ಣಸ್ಪರ್ಶದಿಂದ ಮುದಿ ಹಸುಗಳೂ ಎಳೆಯ ಹಸುಗಳಾದ ಸಂಗತಿಗಳ ವಿವರಣೆ

ಕನೈತ್ತು ಇಳಂಗನ್ರೆರುಮ್ಮೈ - ಪೊಯ್‌ಹೈಆಳ್ವಾರ್ ಸುಪ್ರಭಾತ ತಾಯಿ ಹಸು ಕರುವನ್ನು ನೆನದು ಅಂಬಾ ಎಂದು ಕೂಗಿದಾಗ ಕರು ತಾಯಿಯನ್ನು ಹುಡುಕಿ ಹೋಗುವಂತೆ ಹಾಗೆಯೇ ಭಗವಂತ ಚೇತನನ್ನು ತಾನೇ ಹುಡುಕಿಕೊಂಡು ಹೋಗುತ್ತಾನೆ ಭಕ್ತನೂ ತಾನೂ ಆರ್ತನಾಗಿ ಭಗವಂತನನ್ನು ನೆನೆಯುತ್ತಾನೆ

ಪುಳ್ಳಿನ್ ವಾಯ್ ಕೀಂಡಾನೈ ಪಾಶುರ ತೊಂಡರಡ್ಡಿಪ್ಪಡಿ ಆಳ್ವಾರ್ ಸುಪ್ರಭಾತ ಬಕಾಸುರನನ್ನು ಕೊಂದ ಶ್ರೀಕೃಷ್ಣನ, ದುಷ್ಟರಾಕ್ಷಸನಾದ ರಾವಣನನ್ನು ಸಂಹರಿಸಿದ ರಾಮನ ಸ್ಮರಣೆ ಬಕ ಕೃಷ್ಣನ ಪಾದ ಸ್ಪರ್ಶದಿಂದಲೂ ರಾವಣನು ರಾಮನ ದೃಷ್ಟಿ ಮಾತ್ರದಿಂದ ಮೋಕ್ಷವನ್ನು ಪಡೆದರು

ಉಂಗಳ್ ಪುಳಕ್ಕಡೈ ತ್ತೋಟ್ಟತ್ತು ವಾವಿಯುಳ್ - ಪದ್ಯ ಭಗವಂತನಿಗೆ ನಾವು ಅದೀನರು ಎಂಬುವ ಶೇಷತ್ವವಿಚಾರ ಶಂಖುಚಕ್ರದಾರಿಯೂ ಪುಂಡರೀಕಾಕ್ಷನೂ ಆದ ಭಗವಂತನ ವೈಭವ ವಿವರಣೆ ಪಂಚ ಸಂಸ್ಕಾರ ಸಮಾಶ್ರಯಣಗಳ ಸಂಗತಿಗಳು

ಎಲ್ಲೇ ಇಳಂಕಿಳಿಯೇ - ಪಾಶುರದಲ್ಲಿ ಪರಮೈಕಾಂತಿಯಾಗಿ ನೈಚ್ಚಾನುಸಂಧಾನದಿಂದ ಭಾಗವತ ಶೇಷತ್ವವನ್ನು ನಿಯಮಿಸುವ ರೀತಿನೀತಿಗಳನ್ನು ಗೋದೆ ತಿಳಿಸಿದ್ದಾಳೆ

ನಾಯಕನಾಯ್ ನಿನ್ರ ನಂದಗೋಪನುಡೈಯ - ಪಾಶುರ ಆಚಾರ್ಯ, ತಿರುಮಂತ್ರಾರ್ಥ ವಿಚಾರಗಳು ಗೋಕುಲದ ಕ್ಷೇತ್ರ ಪಾಲಕರ ದ್ವಾರಪಾಲಕರ ಅನುಮತಿ ಬೇಡಿ ಭದ್ರವಾದ ಬಾಗಿಲನ್ನು ತೆಗೆಯುವ ಪ್ರಾರ್ಥನೆ

ಅಂಬರಮೇ ತಣ್ಣೀರೆ - ಪಾಶುರದಲ್ಲಿ ಎಂದೆರುಮಾನ್ ನಂದಗೋಪಾಲಾ ಎದ್ದೇಳು ಪೆಣ್‌ಕು ಲಕ್ಕೆರತ್ನದೀಪವಾದ ದೇವೀ ಯಶೋದಾಂದೇ ಎಚ್ಚರಗೊಳ್ಳು, ವೀರಶ್ರೀಸಂಪನ್ನನಾದ ಬಲದೇವನೇ ಎದ್ದೇಳು - ಇಲ್ಲಿ ಭಾಗವತ ಶೇಷತ್ವ, ನಂದಗೋಪಾಲನ ಔದಾರ್ಯ ಹಿರಿಮೆ ಸಾರುವ ಸಂಗತಿಗಳು

ಉಂದು ಮದಕಳಿತ್ತನ್ - ಪಾಶುರದಲ್ಲಿ ನಪ್ಪಿನ್ನೈ (ನೀಳಾದೇವಿಯು) ಸುಪ್ರಭಾತ ನಂದಗೋಪಾಲಕನ ಮುದ್ದು ಸೊಸೆ ಅವಳು ಪರಿಮಳ ಕಂಪುಬೀರುವ ಕುಂತಳ ಚೆಲುವೆ ಅವಳು ಕದ ತೆಗೆ ಕೋಳಿಗಳು ಕೂಗುತ್ತಿವೆ, ನಿನ್ನ ಕಾಂತನ ದಿವ್ಯ ನಾಮಗಳನ್ನು ಪಾಡುವ ಬಾರಮ್ಮ ಎಂಬುವುದಾಗಿ ಹೇಳಲಾಗಿದೆ

ಕುತ್ತು ವಿಳಕ್ಕೆರಿಯ ಪಾಶುರದಲ್ಲಿ - ದೀಪಸ್ತಂಭದ ದೆಳಕಿನಲ್ಲಿ ಗಜದಂತಹ ಗಟ್ಟಿ ಕಾಲುಗಳುಳ್ಳ ಮಂಚದಲ್ಲಿ ಮೆತ್ತನೆಯ ಐದು ಬಗೆಯ ಹಾಸಿಗೆಯಲ್ಲಿ (ಅರ್ಥ ಪಂಚಕ - ಸ್ವಸ್ವರೂಪ ಇತ್ಯಾದಿ ಐದು ಸ್ವರೂಪಗಳು) ನಿತ್ಯ, ಮುಕ್ತರು, ಭಕ್ತರ್, ಕೇವಲರ್, ಮುಮುಕ್ಷುಗಳು-ಎಂಬುವ ೫ ಲಕ್ಷಣದವರು ಪರಮಾತ್ಮನನ್ನು ತಿಳಿಯುವ ೫ ಬಗೆಯ ಸ್ವರೂಪಗಳು ಕರ್ಮ, ಭಕ್ತಿ, ಜ್ಞಾನ, ಪ್ರಪತ್ತಿ, ಆಚಾರ್ಯೋಪಾಸನೆ ಇತ್ಯಾದಿ ವಿಷಯಗಳು - ಅವುಗಳ ವಿವರಣೆ

ಮುಪ್ಪತ್ತು ಮೂವರ್ ಅಮರರ್ಕ - ಎಂಬುವ ಪಾಶುರದಲ್ಲಿ ಪುರುಷಕಾರಳಾದ ನೀಳಾದೇವಿಯ ಮೊಲೆಯ ಮೇಲೆ ಮಲಗಿರುವ ಮುರಳೀ ಮೋಹನನ ಮನಮೋಹನ ಸ್ವರೂಪವನ್ನೂ, ಮುಕ್ಕೋಟಿ ದೇವತೆಗಳ ವಿಪತ್ತುಗಳನ್ನು ಹೋಗಲಾಡಿಸುವ ಮಹಾ ಬಲಾಢ್ಯನೂ ವಿಮಲನೂ ಆದ ಕೃಷ್ಣನ ಕೃಪಾಲೀಲಾರಸವನ್ನೂ ಸೂಚಿಸಲಾಗಿದೆ

ತಿರುಪ್ಪಾವೈ ೧೭ ಪಾಶುರ, ೧೮, ೧೯ ಮತ್ತು ೨೦ ಪಾಶುರಗಳ ಮೊದಲನೆಯ ಅಕ್ಷರಗಳು ಅ ಉ ಉ ಮತ್ತು ಮ ಇವು ಪ್ರಣವದ ಅ ಉ ಮ ಎಂಬುವ ಮೂರು ಅಕ್ಷರಗಳ ದ್ಯೋತಕ ೧೮ ಮತ್ತು ೧೯ ಎರಡು ಉಕಾರಗಳು ದ್ವಯಾರ್ಥವನ್ನು ತಿಳಿಸುತ್ತವೆ ದ್ವಯ ಮಂತ್ರ ಖಂಡದ್ವಯಾತ್ಮಕವಾದ್ದರಿಂದ ಎರಡು ಪದ್ಯಗಳಲ್ಲಿ ಉಕಾರವು

ಏತ್ತ ಕಲಂಗಲ್ ಎದಿರ್‌ಪೊಂಗಿ ಮಿಾದಳಿಪ್ಪ - ಪಾಶುರದಲ್ಲಿ ಗೋದೆಯ ಅಕಿಂಚನ್ಯ ನಿವೇದನೆ ಈ ಪದ್ಯದಲ್ಲಿದೆ ಆಶ್ರಿತ ರಕ್ಷಣದಲ್ಲಿ ದೃಢಮನಸ್ಸುಳ್ಳ ಎಲ್ಲರ ಪರಂಜ್ಯೋತಿ ಎದ್ದೇಳು

ಉನ್ ವಾಶಲ್‌ಕಣ್ - ನಿನ್ನ ಬಾಗಿಲಲ್ಲಿ, ಆತ್ತಾದುಮದು - ಆರ್ತಿತೀರದೆ ಶರಣಾಗತರಾಗಿ ಬಂದು ನಿನ್ನ ಪಾದಗಳಿಗೆ ಶರಣಾಗತರಾಗಿ ಬಂದಿರುವೆವು ನಿನ್ನ ಗುಣಗಾನ ಮಾಡಲು ಬಂದಿದೆವವು

ಅಂಗಣ್ಮಾ ಜ್ಞಾಲತ್ತು ಅರಶರ್ - ಪಾಶುರದಲ್ಲಿ ಗೋದೆ ತನ್ನ ಅನನ್ಯಾರ್ಹ ಶೇಷತ್ವವನ್ನು ಪ್ರಕಟಿಸಿದ್ದಾಳೆ ಆತ್ಮಾಭಿಮಾನ ತೊರೆದು ಭಗವಂತನ ಅಸಂಖ್ಯೇಯ ಕಲ್ಯಾಣ ಗುಣಗಳಿಗೆ ಮಾರುಹೋಗಿ ಅವನು ನಮ್ಮನ್ನು ಖಂಡಿತ ರಕ್ಷಿಸುವನೆಂಬ ಮಹಾ ವಿಶ್ವಾಸದಿಂದ ಅವನಿಗೊಬ್ಬನಿಗೆ ವಿನಾ ದೇರೆಯವರಿಗೆ ತಾನು ದಾಸನಲ್ಲ ಎಂಬುವ ಹೃದಯಭಾವವೇ ಅನನ್ಯಾರ್ಹ ಶೇಷತ್ವವು. ಅಭಿಮಾನಗಳಾದ ಆಸೆ ಆಕಾಂಕ್ಷೆಗಳನ್ನು ತೊರೆದು ಆರು ಪ್ರಾಕಾರಗಳನ್ನು ದಾಟಿ ಪರಮಾತ್ಮನ ಕೃಪಾಕಟಾಕ್ಷೆಗಾಗಿ ಬಂದಿರುವೆವು ಎಂಬುವುದಾಗಿ ಗೋದೆ ನಿವೇದಿಸುತ್ತಾಳೆ

ಮಾರಿಮಲೈ ಮುಳಂಜಿಲ್ ಮನ್ನಿಕ್ಕಿಡಂದು ಉರಜ್ಗುಂ ಶೀರಿಯಶಿಂಗಂ - ಎಂಬುವ ಪದ್ಯದಲ್ಲಿ ಗೋದೆಯ ಕೂಗನ್ನು ಕೇಳಿ ಕೃಷ್ಣ ಅನನ್ಯ ಶರಣಳಾಗಿ ಬಂದವಳನ್ನು ನೋಡಲು ಎದ್ದು ಬರುವ ಹೃದಯಂಗಮ ದೃಶ್ಯ ಮಳೆಗಾಲದಲ್ಲಿ ಪರ್ವತದ ಗುಹೆಯಲ್ಲಿ ಮಲಗಿ ನಿದ್ರಿಸಿದ ಸಿಂಹ ಎದ್ದು ಕೆಂಗಣ್ಣು ಬಿಟ್ಟು ರೋಮಗಳೊಡನೆ ರಾಜ ಠೀವಿಯಿಂದ ಅರ್ಭಟಿಸುತ್ತ ಹೊರಗೆ ಬರುವಂತೆ ಅತಸೀ ಕುಸುಮಗಾತ್ರನಾದ ವನಮಾಲಿ ಭಕ್ತರಿಗೆ ಅಭಯ ಪ್ರದಾನಮಾಡಲು ಹೊರಗೆ ಬಂದು ದಿವ್ಯ ಸಿಂಹಾಸನವನ್ನು ಅಲಂಕರಿಸಿದ ಶ್ರೀರಂಗದಲ್ಲಿ ವೈಕುಂಠ ಏಕಾದಶಿ ದಿವಸ ಈ ತರಹ ಸಾವಿರ ಕಾಲು ಮಂಟಪಕ್ಕೆ ಬಂದು ಬಿಜಯಮಾಡಿಸುವ ದೃಶ್ಯ ಅನುಪಮ ನಿರತಿಶಯ



## ಮಾರಾಟಕ್ಕೆ ಸಿದ್ಧವಾಗಿರುವ ಪುಸ್ತಕಗಳು

ಶ್ರೀ ವೆಂಕಟೇಶ ಸುಪ್ರಭಾತ
ವ್ಯಾಖ್ಯಾನಸಹಿತ ಬೆಲೆ 2-50
ಗುರು ಶ್ರೀಶ ವಿಠಲದಾಸರ ಕೃತಿಗಳು
ಸಂ - ಕೆ ಅಪ್ಪಣ್ಣಾಚಾರ್ಯ ಬೆಲೆ 6-00
ದಾಸತತ್ವಪ್ರಕಾಶಿಕೆ
ಸಂ - ಕೆ ಅಪ್ಪಣ್ಣಾಚಾರ್ಯ ಬೆಲೆ 10-00
ಸ್ತೋತ್ರಕುಸುಮ ಮಾಲಾ
ಸಂ - ಎಂ ಎಸ್. ವೆಂಕಟಾಚಲಂ 3-00
ತ್ಯಾಗರಾಜಸ್ವಾಮಿ ಕೃತಿಗಳ
ಹಲವು ಮುಖಗಳು
ಎನ್ ಎಸ್ ಮೂರ್ತಿ ಬೆಲೆ 2-60
ಕರ್ನಾಟಕ ಹರಿದಾಸರು
ತೆಲುಗು, ಹಿಂದಿ, ಆಂಗ್ಲ, ಕನ್ನಡ 2-25
ಶ್ರೀ ಶ್ರೀನಿವಾಸನ ಹಾಡುಗಳು
ಪ್ರಸನ್ನ ವೆಂಕಟದಾಸರು
ಸಂ - ಕೆ ಅಪ್ಪಣ್ಣಾಚಾರ್ಯ ಬೆಲೆ 7-00
ಕನಕದಾಸರು ಅವರ ಸಾಹಿತ್ಯಸಮೀಕ್ಷೆ
ಸಂ - ಕೆ ಅಪ್ಪಣ್ಣಾಚಾರ್ಯ 16-00
ಶ್ರೀದವಿಠಲದಾಸರ ಕೃತಿಗಳು
ಸಂ - ಕೆ ಅಪ್ಪಣ್ಣಾಚಾರ್ಯ ಬೆಲೆ 9-00
ಉರಗಾದ್ರಿವಾಸ ವಿಠಲದಾಸರ
ಜೀವನ ಮತ್ತು ಕೃತಿಗಳು
ಸಂ - ಕೆ ಎಂ ಕೃಷ್ಣರಾವ್ ಬೆಲೆ 15-00
ಶ್ರೀ ಗುರು ವಿಜಯ ವಿಠಲದಾಸರ ಅಷ್ಟಕ
ಬೆಲೆ 3-00
ಪುರಂದರೋಪನಿಷತ್
ಬನ್ನಂಜೆ ಗೋವಿಂದಾಚಾರ್ಯ 6-75
ನಮ್ಮ ಸಮಸ್ಯೆಗಳಿಗೆ 7-00
ಭಗವದ್ಗೀತೆಯ ಪರಿಷ್ಕಾರ
- ಡಾ|| ಎಸ್ ಬಿ ರಘುನಾಥಾಚಾರ್ಯ
ಗೀತಾಸಾರೋದ್ಧಾರ 14-00
ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಪಾದರು

ಅಂಚೆ ವೆಚ್ಚ ಪ್ರತ್ಯೇಕ ಸಗಟು ಖರೀದಿಗೆ ಆಕರ್ಷಕ ಕಮೀಷನ್ ಉಂಟು ವಿ ಪಿ ಪಿ ಇಲ್ಲ ಡಿ ಡಿ ಗಳನ್ನು ಮಾತ್ರ ಸ್ವೀಕರಿಸಲಾಗುವುದು ಕೂಡಲೇ ಬರೆಯಿರಿ

ಪುಸ್ತಕಮಾರಾಟ ವಿಭಾಗ,
ತಿ ತಿ ದೇ. ತಿರುಪತಿ - 517 507



ಹಿಂದಿನ ಪಾಶುರದಲ್ಲಿ ಬಿಜಯಮಾಡಿಸಿದ ಸ್ವಾಮಿಗೆ ೨೪ ನೇ ಪಾಶುರದಲ್ಲಿ ಮಂಗಳಾಶಾಸನ - ಅನ್ರು ಇವ್ವುಲಗಂ ಅಳನ್ದಾಯ್ (ನಿನ್ನ) ಅದೆ ಪೋತ್ತಿ - ಅಂದು ಮೂಜಗವನಳೆದ ನಿನ್ನ ಸಿರಿಯಡಿಗೆ ಮಂಗಳ ದಕ್ಷಿಣ ಲಂಕೆಗೆ ಪೋಗಿ ರಕ್ಕಸರನ್ನು ಸಂಹರಿಸಿದ ನಿನ್ನ ತೋಳ್ಬಲಗಳಿಗೆ ಮಂಗಳ ಶಕಟಾಶುರನನ್ನು ಒದ್ದುಕೊಂದ ನಿನ್ನ ಯಶಸ್ಸಿಗೆ ಮಂಗಳ ವತ್ಸರೂಪ ಅಸುರನನ್ನು ಕವಣೆಯಂತೆ ಬಾಸ್ಗೆಸೆದ ನಿನ್ನ ಅಡಿದಾವರೆಗಳಿಗೆ ಮಂಗಳ ಗೋವರ್ಧನಧಾರಿ ಗಿರಧರ, ನಿನ್ನ ಗುಣಗಣಗಳಿಗೆ ಮಂಗಳ ವೈರಿಜನರ ಶಿರಗಳನ್ನು ತರಿವ ನಿನ್ನ ವೇಲಾಯುಧಕ್ಕೆ ಮಂಗಳ ನಿನ್ನ ಚರಿತಾಮೃತವನ್ನು ಸ್ತುತಿಸುವ ನಮ್ಮ ಬಯಕೆ ಈಡೇರಿಸು ಸ್ವಾಮಿ ಎಂಬುವುದಾಗಿ ಸ್ತೋತ್ರ ಮಾಡಿದ್ದಾಳೆ ಗೋದೆ ಸಂಗೀತ ಸಾಹಿತ್ಯ ಸೇರಿ ಸಹೃದಯರು ಸಂತೋಷಗೊಂಡರು

ಒರುತ್ತಿಮಗನಾಯ್ ಪಿರಂದು ಓರಿರವಿಲ್ ಪಾಶುರದಲ್ಲಿ - ನೀನ್ನ ನೆಡುಮಾಲೇಮುನ್ನೈ ಏಲೋರೆಂಪಾವಾಯ್ - ಹಿಂದಿನ ಪದ್ಯದಲ್ಲಿ ಸ್ವಾಮಿಗೆ ಮಂಗಳಾಶಾಸನವನ್ನು ಮಾಡುವ ನಿನ್ನ ಚರಿತಾಮೃತವನ್ನು ಕೊಂಡಾಡುವ ಎಂಬುವುದಾಗಿ ಸೂಚಿಸಿರುವಂತೆ ಕೃಷ್ಣ ಪ್ರೇಮಾಮೃತದಲ್ಲಿ ಮುಳುಗಿರುವ ಅವಳು ದೇವಕೀ ಪುತ್ರನ ಕಂಸಾರಿಸ್ಮರಣೆ ಸಂಸಾರದಿಂದ ಮುಕ್ತಿ ಎಂಬುವುದರ ಅರ್ಥವನ್ನು ಅರಿತ ಆ ಬಾಲೆ ಕೃಷ್ಣನನ್ನು ನೆಡುಮಾಲೇ ಎಂಬುವುದಾಗಿ ಸಂಬೋಧಿಸುತ್ತಾ ಓ ಪ್ರಭು ನಿನ್ನಡಿಯನರಸಿ ಬಂದಿಹೆವು. ನಿನ್ನ ನಿತ್ಯ ಕೈಂಕರ್ಯ ಪ್ರಾಪ್ತಿಕೊಡು" ಎನ್ನುವಳು ಸ್ವಾಮಿ ಸತ್ಯಸಂಕಲ್ಪ ಹಾಗೂ ಸತ್ಯಕಾಮನು ಆ ಸತ್ಯಕಾಮನೇ ನೆಡುಮಾಲ್ ಪ್ರಪನ್ನರಿಗೆ ಸುಲಭನು ಇತರರಿಗೆ ದುರ್ಲಭನೂ ಆದವನು ಈ ನೆಡುಮಾಲನು

ಮಾಲೇ ಮಣಿವಣ್ಣಾ ಮಾರ್ಗಳಿ ನೀರಾಡುವಾನ್ - ಎಂಬುವ ಪಾಶುರದಲ್ಲಿ ಪರಮಾತ್ಮನನ್ನು ಕುರಿತು ತಮಗೆ ಬೇಕಾದ ವಸ್ತುಗಳನ್ನು ಕೇಳುತ್ತಾಳೆ ಹಾಲಿನಂತೆ ಬೆಳ್ಳಗಿರುವ ಶಂಖ, ನಗಾರಿ, ಮಂಗಳಾಶಾಸನವನ್ನು ಮಾಡುವರನ್ನು ದೀವಟಿಗೆಗಳನ್ನು - ಧ್ವಜಪಟಗಳನ್ನು, ಚೆಲುವ ಚಪ್ಪರವನ್ನು

ಕೂಡಾರೈ ವೆಲ್ಲುಂ ಶೀರ್ ಗೋವಿಂದಾ ಉನ್ದನ್ನೈ - ಕೂಡಿಕೊಳ್ಳದವರನ್ನು ಕೂಡಿಕೊಳ್ಳುವ ಗುಣವುಳ್ಳವನು ಶೀರ್ - ಕಲ್ಯಾಣ ಗುಣಗಳ ಗಣಿ ಗೋವಿಂದನು ಗೋವಿನಂತೆ ಏನೂ ಅರಿಯದ ಮಾನವ ಪಶುಗಳನ್ನು ರಕ್ಷಿಸುವನು ದ್ರೌಪದೀ ಆ ನಾಮದಿಂದ ಕೂಗಿದಾಗ ದೂರದಿಂದಲೇ ಅವಳನ್ನು ರಕ್ಷಿಸಿದ ಗೋಪಾಲನು ಗೋಪೀಪ್ರಿಯನು ಗೋ ಎಂದರೆ ಭೂಮಿ, ವೇದ, ಜ್ಞಾನ, ಹಸು ವಿಂದ ಎಂದರೆ ಪಡೆಯುವುದು ಗೋವಿಂದೋ ಗೋವಿಂದಾಂಪತಿಃ - ಭೀಷ್ಮರವಾಣಿ ಈ ಪಾಶುರದಲ್ಲಿ ತಾವು ಹಿಂದೆ ತ್ಯಜಿಸಿದ ವ್ರತ - ವಸ್ತ್ರಾಚರಿಸಿದ ಮೇಲೆ ವಸ್ತುಗಳನ್ನು ಪುನಃ ಸ್ವೀಕಾರಮಾಡುವ ಸಂದರ್ಭ ತಿಳಿಸುತ್ತೆ ನಾವು ಪಟಹ, ಕಂಕಣ, ಭುಜಕೀರ್ತಿ, ಕಿವಿಯೋಲೆ, ಕರ್ಣಾಭರಣಗಳನ್ನು ಧರಿಸುವೆವು. ಮತ್ತೆ ಕಣ್ಣಿಗೆ ಕಾಡಿಗೆ ಹಚ್ಚಿಕೊಳ್ಳುವೆವು. ನಿನ್ನ ಶೇಷ ವಸ್ತ್ರಗಳನ್ನು ಧರಿಸಿ ಕ್ಷೀರಾನ್ನವನ್ನು ಭುಜಿಸುತ್ತೇವೆ ವ್ರತ ಸಮಾಪ್ತವಾಗಿ ನಮ್ಮ ನೋಂಪಿ ಸಾರ್ಥಕವಾಯಿತು

ಕರವೈಕಳ್ ಪಿನ್ಶೆನ್ರು ಕುರೈ ವೊನ್ರು ಮಿಲ್ಲಾದ ಗೋವಿಂದಾ ಉನ್ ತನ್ನೋಡು - ಹಸುಗಳನ್ನು ಕಾಡಿನಲ್ಲಿ ಮೇಯಿಸಿ ಶರೀರ ಪೋಷಣೆ ಮಾಡುವ ನಾವು ತಿಳಿವಳಿಕೆಯಿಲ್ಲದವರು ನೀನು ನಮ್ಮ ಕುಲದಲ್ಲಿ ಬೆಳೆದಿದ್ದೇ ನಮಗೆ ಮಹಾಪುಣ್ಯ ನಿನ್ನೊಡನೆ ಗೋಪಿಯರಾದ ನಾವು ಸಲುಗೆಯಿಂದ ನಡೆದುದನ್ನು ಕ್ಷಮಿಸಿ ಕಾಪಾಡು ಯಾವ ಕೊರತೆಯು ಇರದ ಗೋವಿಂದ ನಮ್ಮ ಇಷ್ಟಾರ್ಥವನ್ನು ನೀಡು ಓ ದೊರೆಯೆ

ಶಿತ್ತಮ್
ಶಿರುಕಾಲೇ ಉನ್ನೈ ಚ್ಚೇವಿತ್ತು ಉನ್ ಅನ್ರುಕಾಣ್ ಗೋವಿಂದಾ ರೆಂಬಾವಾಯ್ ಮುಂಜಾನೆ ಬಂದಿರುವ ನಾವು ನಿನ್ನ ಪದ ಪಂಕಜವ ಪೊಗಳುವ ಬಯಕೆ ಓ ಗೋವಳರ ಕುಲ ಬಂಧು ಗೋಪಾಲ ಏಳೇಳು ಜನ್ಮಕ್ಕೂ ನಿನ್ನೊಡನೆ ಅನನ್ಯಾರ್ಹರಾಗಿ ನಿನ್ನ ನಿತ್ಯ ಕೈಂಕರ್ಯ ನಿರತರಾಗಿರುವಂತೆ ಅನುಗ್ರಹಿಸು ನಮ್ಮ ಇತರ ಬಯಕೆಗಳನ್ನು ನೀಗಿಸು ನಿನಗೆ ಶೇಷನಾಗಿರುವುದೇ ಪರಮ ಪುರುಷಾರ್ಥ

ವಂಗಕ್ಕಡಲ್ ಕಡೈಂದ ಮಾಧವನ್ನೈ ಕ್ಕೇಶವನ್ನೈ - ಪಾಶುರದಲ್ಲಿ ಗೋದೆ ರಚಿಸಿದ ತಿರುಪ್ಪಾವೈ ಮುಪ್ಪದುಂ ತಪ್ಪಾದೇ - ೩೦ ಪದ್ಯಗಳನ್ನೂ ಒಂದನ್ನೂ ತಪ್ಪದೆ ಅನುಸಂಧಾನ ಮಾಡುವವರು ನಾಲ್ತೋಳ, ಕೆಂಪುದಾವರೆಯ ಕಣ್ಣಿನ ಕೃಷ್ಣನ ಕೃಪೆ ಲಭಿಸಿ ಭವತಾಪ ಕಳೆದು ಸುಖ ಸಂಪತ್ತನ್ನು ಮೋಕ್ಷ ಲಕ್ಷ್ಮಿಯನ್ನು ಹೊಂದುವರು ಇದು ಫಲಶ್ರುತಿ ಬಾಲ್ಯೇಪಿ ಪಕ್ವ ಚರಿತಾಂ ಭಜ ಚಿತ್ತ ಗೋದಾಂ - ಎಂಬುವಂತೆ ಇನ್ನೂ ಬಾಲಕಿಯಾಗಿರುವಾಗಲೇ ಪರಿಪಕ್ವವಾದ ಭಗವತ್ ಭಕ್ತಿಯಿಂದ ಮಧುರಭಾವದಿಂದ ಹೃದಯ ತುಂಬಿ ಹಾಡಿದ ತಿರುಪ್ಪಾವೈ ನಮಗೆಲ್ಲ ರಸಾನುಭಾವವನ್ನು ನೀಡಲಿ

ಆಂಡಾಳ್ ತಿರುವಡಿಗಳೇ ಶರಣಂ

* * *

# ಹರಿದಾಸ ಹೃದಯ

- "ಭಾರತಿ"

ಆಚಾರ್ಯಾಃ ಶ್ರೀಮದಾಚಾರ್ಯಾಃ ಸಂತು ಮೇ ಜನ್ಮ ಜನ್ಮನಿ - ಎಂಬ ಸೂಕ್ತಿ ಗುರು, ಆಚಾರ್ಯರ ಮಹಿಮಾನ್ವಿತ ಶಕ್ತಿಯನ್ನು ಕುರಿತು ಹೇಳುವುದು ತಪಸ್ಸಿನ ನೆಲೆ, ಕರ್ಮಭೂಮಿ, ಯೋಗದ ನೆಲೆ ವೀಡು, ವೇದೋಪನಿಷತ್ತು ಹಾಗೂ ರಾಮಾಯಣ ಭಾರತ ಭಾಗವತಗಳಂತಹ ವೇದಾಂತ ಗ್ರಂಥ ಸಂಪದದ ತವರೂರಾಗಿರುವ ಭಾರತದ ಇತಿಹಾಸ ದಲ್ಲಿ ಧರ್ಮ ಹಾಸು ಹೊಕ್ಕಾಗಿದೆಯೆಂಬುದು ಸುವಿ ಧಿತ

ಧಾರಯತೀತಿ ಧರ್ಮ ಧರಿಸುವ ಶಕ್ತಿಯು ಳ್ಳದ್ದು ಧರ್ಮ ಅದಕ್ಕೆ ಪೂರಕ ಪೋಷಕ - ನ್ಯಾಯ ನೀತಿ - ಮೊದಲಾದ ಋಜುಗುಣದ ಮೌಲ್ಯಗಳು ಭಾರತ ಮಾತ್ರವಲ್ಲ ವಿಶ್ವ ವಿಖ್ಯಾತವೆಂದೇ ಎನಿಸಿ ರುವ ಮೂವರು ವೇದಾಂತ ಧರ್ಮ ಪ್ರವರ್ತಕರಲ್ಲಿ ಮೊದಲನೆಯವರು ಶಂಕರಾಚಾರ್ಯರು, ಎರಡನೆ ಯವರು ರಾಮಾನುಜರು ಶಂಕರರು ಕೇರಳದ ಕಾಲಡಿಯವರಾದರೆ ರಾಮಾನುಜರು ತಮಿಳುನಾ ಡಿನ ಶ್ರೀಪೆರಂಬುದೂರಿನವರು ಆ ಮೇಲೆ ಅವತ ರಿಸಿದವರು ಕರ್ನಾಟಕದ ಉಡುಪಿ ಕ್ಷೇತ್ರದ ಬಳಿಯ ಪಾಜಕದಿಂದ ಬಂದ ಶ್ರೀಮಧ್ವಾಚಾರ್ಯರು ತಾವು ಹುಟ್ಟಿಬೆಳೆದ ಪ್ರದೇಶದ ವ್ಯಾಪ್ತಿಯನ್ನು ಮೀರಿ ಭಾರ ತವಿಡೀ ಪ್ರಭಾವ ಬೀರಿದ್ದು ಈ ಆಚಾರ್ಯತ್ರಯರ ವೈಶಿಷ್ಟ್ಯ ಸಮಾಜದಲ್ಲಿ ನ್ಯಾಯ ನೀತಿ ಧರ್ಮ - ಸಾತ್ವಿಕತೆ ಆರೋಗ್ಯಯುತ ಬದುಕನ್ನು ನೆಲೆಗೊಳಿ ಸಲೆಂದೇ ಶ್ರಮಿಸಿದವರು ಆಚಾರ್ಯ ತ್ರಯರಾದ ಶಂಕರ ರಾಮಾನುಜ ಮಧ್ವರು ಪ್ರಕೃತ ಈ ಲೇಖ ನದಲ್ಲಿ ಆನಂದ ತೀರ್ಥರೆನಿಸಿದ ಮಧ್ವಾಚಾರ್ಯರು ಹಾಗೂ ಅವರ ಅನುಯಾಯಿಗಳಾದ ಹಲವು ಹರಿ ದಾಸರನ್ನು ಪರಿಚಯಿಸುವುದಾಗಿದೆ

ಮಧ್ವಾಚಾರ್ಯರು ಜನಿಸಿದ್ದು ಶಾಲಿವಾಹನ ಶಕ 1160 ಮಾಘ ಶುದ್ಧ ನವಮಿ ಅಂದರೆ ಕ್ರಿ ಶ 1238 ಎಂಬ ವಿಚಾರ ಉಡುಪಿಯ ಅಷ್ಟಮಠ ಶಾಸನಗಳಲ್ಲಿ ದೊರೆಯುತ್ತದೆ ಅದೇ ರೀತಿಯಲ್ಲಿ ಆಚಾರ್ಯರ ನಿರ್ಗಮನ ಕ್ರಿ ಶ 1318 ಮಾಘ ಶುದ್ಧ ನವಮಿ ಎಂದೂ ವಿದ್ವಾಂಸರು ನಿರ್ಧರಿ ಸಿದ್ದಾರೆ ಈ ಪುಣ್ಯದಿನವನ್ನು ಮಧ್ವನವಮಿ ಎಂದೂ ಮಾಧ್ವ ಸಂಪ್ರದಾಯದವರು ತುಂಬ ಶ್ರದ್ಧೆ ಯಿಂದ ಆಚರಿಸುವುದು ರೂಢಿಯಲ್ಲಿದೆ ಅವರ ಅದ್ಭುತ ತರ್ಕ - ಪ್ರತಿಭೆಯಿಂದ ಯೌಗಿಕ ಸಾಮರ್ಥ್ಯ ದಿಂದ ಕೂಡಿದ ವಿದ್ವತ್ತಿನಿಂದಾಗಿ ಅನೇಕ ಹೆಸರು ಗಳಿಂದ ಮಧ್ವಾಚಾರ್ಯರನ್ನು ಗುರುತಿಸಲಾಗಿದೆ ಆನಂದ ತೀರ್ಥರು, ಪೂರ್ಣಪ್ರಜ್ಞರು, ಸುಖತೀ ರ್ಥರು, ಮೋದತೀರ್ಥರು - ಹೀಗೆ ಮಧ್ವಾಚಾ ರ್ಯರಿದ್ದದ್ದು 80 ವರ್ಷ ಅಷ್ಟೇ ನಿಷ್ಠ ಯೋಗಿಯ



ಬದುಕು ಅವರ ಅದ್ಭುತತರ್ಕ ಎಷ್ಟು ಅಸದಳವೋ ಅಷ್ಟೇ ಮಟ್ಟಿಗೆ ಅವರು ಪ್ರತಿಪಾದಿಸಿ, ಪ್ರಚಾರ ಪಡಿ ಸಿದ ದ್ವೈತ ಸಿದ್ಧಾಂತ ನೂತನ ಚಿರಂತರ ಚಿಂತನ, ಅನುಸರಣೀಯಪಂಥವಾಗಿದೆ ಎಂದರೆ ಉತ್ಪ್ರೇಕ್ಷೆ ಯಾಗದು

ಮಧ್ವಾಚಾರ್ಯರ ನಂತರ ಅವರ ಸಾಕ್ಷಾತ್ ಶಿಷ್ಯ ಪರಂಪರೆಯಲ್ಲಿ ಪದ್ಮನಾಭತೀ ರ್ಥರು ಆಚಾರ್ಯ ಪೀಠವನ್ನು ಕ್ರಿ.ಶ 1318-1324 ರಲ್ಲಿಯೂ, ಅಕ್ಷೋಭ್ಯ ತೀರ್ಥರು (ಕೂಡಲಿ - ಶಿವ ಮೊಗ್ಗ ಜಿಲ್ಲೆಯಲ್ಲಿ ಅವರ ಪುರಾತನ ಮಠ ಇಂದೂ ಇದೆ) ಕ್ರಿಶ 1350 - 1360 ರ ಅವಧಿಯಲ್ಲಿ, ನರಹರಿ ತೀರ್ಥರು 1324 - 1333 ರಲ್ಲಿಯೂ ಮಾಧವ ತೀರ್ಥರು 1333 - 1350 ರಲ್ಲಿಯೂ, ಜಯತೀರ್ಥರು (ಟೀಕಾಚಾರ್ಯರೆಂದೇ ಪ್ರಸಿದ್ಧ ರಾದವರು) 1365 - 1388 ರ ಅವಧಿಯಲ್ಲಿಯೂ ಆಚಾರ್ಯಪೀಠದಲ್ಲಿದ್ದು ಕಾರ್ಯವನ್ನು ನಿರ್ವಹಿಸಿ ದರೆಂದು ತಿಳಿದು ಬರುತ್ತದೆ ಅಲ್ಲಿಂದ ಮುಂದೆ ಮಾಧ್ವ ಸಂಪ್ರದಾಯ ಸ್ವತಂತ್ರವಾಗಿ ಕವಲೊಡೆದು ಮಠಗಳ ಮೂಲಕ ಮುಂದುವರೆಯಿತು

ಮಧ್ವಾಚಾರ್ಯರ ಪ್ರಭಾವ, ತುಂಬ ವಿಶಿಷ್ಟ ತೆರ ನಾದದ್ದು ಸಂಪೂರ್ಣ ವೈದಿಕ ಮತ ವೇದಾಂತ ತತ್ವ ದೋಧನೆ ಇಡೀ ಕರ್ನಾಟಕದಲ್ಲಿ ರಾಮಾನು ಜಾಚಾರ್ಯರ ನಂತರ ಭಕ್ತಿ ಪಂಥಕ್ಕೆ, ಹರಿಸರ್ವೋ ತ್ತಮತ್ವ ತತ್ವಪ್ರಚಾರಕ್ಕೆ ಒಂದು ಹೊಸ ಆಯನ ತೋರಿ ತಮ್ಮ ತಪಃಶಕ್ತಿಯನ್ನು ಧಾರೆಯೆರೆದು ಬೆಳೆಸಿದ ವೈಶಿಷ್ಟ್ಯ ಆನಂದತೀರ್ಥರದು ಶಾಸ್ತ್ರ ಗ್ರಂದ ರಚನೆಯ ಸಂಪ್ರದಾಯವನ್ನೇ ಸ್ಥಾಪಿಸಿ ತಾವೇ ಅನೇಕ ಶಾಸ್ತ್ರಗ್ರಂದಗಳನ್ನು ರಚಿಸಿದ ಮಂತ್ರದ್ರಷ್ಟಾ ರರು ಮಧ್ವರು ಹೀಗೆ ಅನೇಕ ವೈಶಿಷ್ಟ್ಯಗಳ ಜೊತೆಗೆ ಒಟ್ಟಾರೆ ಕನ್ನಡನಾಡಿನ ಕೀರ್ತಿ ಕಳಶಪ್ರಾಯರಾದ ವರು ಮಧ್ವಾಚಾರ್ಯರು ಎಂಬುದು ಅವರಿಗೊಪ್ಪಿ ಸುವ ಅಭಿನಂದನೆಯಾದೀತು ಮಧ್ವ ಸಿದ್ಧಾಂತವು- ತತ್ವವಾದವು - ಶ್ರೀಮನ್ಮಧ್ವಮತೇ ಹರಿಃ ಪರತರಃ ಎಂಬಂತೆ ಹರಿಸರ್ವೋತ್ತಮ ಪ್ರತಿಪಾದಕ ಅದೇ ಅಲ್ಲಿನ ಪ್ರಧಾನ ರಸ ಸ್ಥಾಯಿ

ಸದಾ ಗಮ್ಯೈಕ ವಿಜ್ಞೇಯಂ
ಸಮತೀತ ಕ್ಷರಾಕ್ಷರಂ
ನಾರಾಯಣಂ ಸದಾ ವಂದೇ
ನಿರ್ದೋಷಾಶೇಷ ಸದ್ಗುಣಂ

- ಎಂಬುದಾಗಿ ಆಚಾರ್ಯರು ತಮ್ಮ 'ವಿಷ್ಣು ತತ್ವ ವಿನಿರ್ಣಯ'ದ ಆರಂಭದಲ್ಲಿ ಘೋಷಿಸುತ್ತಾರೆ ಅಖಿಲ ಕಲ್ಯಾಣ ಗುಣಗಣ ಪರಿಪೂರ್ಣನಾದವನು ಶ್ರೀಹರಿ ಅವನು ಆನಂದ, ನಿರ್ದೋಷಿ, ಅಪ್ರ ಮೇಯ ಹಾಗೂ ವೇದಗಳಿಂದ (ಅಖಿಲಾಮ್ನೈಕ ವೇದ್ಯೋ ಹರಿಃ ) ಆ ಮಹಾ ಮಹಿಮನನ್ನು ಅರಿಯಲು ಸಾಧ್ಯ ಎನ್ನುವುದು ಮಧ್ವರ ವಾದದ ತಿರುಳು ಹರಿಯೇ ಸರ್ವೋತ್ತಮ, ಅವನ ಶಕ್ತಿ ಚಿಂತ ನೆಗೆ ನಿಲುಕದುದು ಅದ್ಭುತವಾದದ್ದು ಮತ್ಸ್ಯಾದಿ ಅವತಾರಗಳು ಪ್ರಾದುರ್ಭಾವಗಳು ಆತ ಸರ್ವ

ತಂತ್ರ ಸ್ವತಂತ್ರ. ಭಕ್ತಿಗೆ ಗಮ್ಯನಾಗಿ ಗೋಚರಿಸುತ್ತಾನಷ್ಟೆ. ಹರಿಗೆ ಪ್ರೇಯಸಿಯಾಗಿ ರಮಾದೇವಿ. (ಲಕ್ಷ್ಮೀದೇವಿ) ದುಃಖದೂರಳೂ, ಸಂಸಾರಮುಕ್ತಳೂ, ಆದ ಆಕೆ ತ್ರಿಗುಣಗಳನ್ನು ನಿಯಂತ್ರಿಸಿ, ಪ್ರಪಂಚವನ್ನು ಪ್ರವರ್ತಿಸುತ್ತಾಳೆ ಆ ಶಕ್ತಿ ಶ್ರೀಹರಿಯಿಂದಲೇ ಆಕೆಗೆ ದತ್ತವಾದದ್ದು ಸ್ವತಂತ್ರನಾದ ಹರಿ - ಆತನಿಗೆ ಅಧೀನ ರಮಾದೇವಿ, ವಿಶ್ವಕ್ಕೆ ಮೂಲಕಾರಣರು. ಮಧ್ವಾಚಾರ್ಯರ ವಾದ ಜಗತ್ತನ್ನು ಸತ್ಯವೆನ್ನುತ್ತದೆ ಹಾಗೆಯೇ ಅವರವರ ಯೋಗ್ಯತೆ - ತಾರತಮ್ಯತೆಗೆ ತಕ್ಕಂತೆ ಜೀವ ದೇವ ಭೇದವೂ ಶತಃಸಿದ್ಧ. ವ್ಯಾಸರಾಯರು ದ್ವೈತಸಿದ್ಧಾಂತವನ್ನು ಸ್ಥಾಪಿಸಲೋಸುಗವೇ ಈ ಶ್ಲೋಕವನ್ನು ರಚಿಸಿದ್ದಾರೆ

ಶ್ರೀಮನ್ಮಧ್ವ ಮತೇ ಹರಿಃ ಪರತರಃ
ಸತ್ಯಂ ಜಗತ್ತತ್ವತೋಭಿನ್ನೋ
ಜೀವಗಣಾಃ ಹರೇರನುಚರಾಃ
ನೀಚೋಚ್ಚ ಭಾವಂ ಗತಾಃ
ಮುಕ್ತಿರ್ನೈಜ ಸುಖಾನುಭೂತಿಃ
ಅಮಲಾಭಕ್ತಿಶ್ಚ ತತ್ಸಾಧನಂ
ಹ್ಯಕ್ಷಾದಿ ತ್ರಿತಯಂ ಪ್ರಮಾಣಂ
ಅಖಿಲಾಮ್ನಾಯೈಕ ವೇದ್ಯೋ ಹರಿಃ

ಇದರ ತಾತ್ಪರ್ಯ ಹೀಗೆ - ಹರಿಯೇ ಸರ್ವೋತ್ತಮನು ಈ ಜಗತ್ತು ಸತ್ಯ ಪಂಚಭೇದವೂ ಸತ್ಯವಾದದ್ದು ಹರಿ - ಜೀವ, ಹರಿ - ಜಡ, ಜೀವ - ಜೀವ, ಜೀವ - ಜಡ, ಜಡ - ಜಡ -ಹೀಗೆ ಪಂಚಭೇದಗಳುಂಟು ಮುಕ್ತಿಯೆಂಬುದು ಒಂದು ನಿತ್ಯ ಸತ್ಯ ಸ್ಥಿತಿ. ಮುಕ್ತಿಯಾದರೂ ಜೀವನು ಯಾವತ್ತೂ ಹರಿಯ ಅನುಚರನೇ ದೋಷರಹಿತವಾದ ಭಕ್ತಿಯೇ ಮುಕ್ತಿಗೆ ಸಾಧನ ಪ್ರತ್ಯಕ್ಷ, ಅನುಮಾನ, ಆಗಮ, ಎಂಬ ಮೂರೂ ಪ್ರಮಾಣಗಳು ಎಲ್ಲ ವೇದಗಳಿಂದ ಮಾತ್ರವೇ ಹರಿಯನ್ನು ತಿಳಿಯಲು ಸಾಧ್ಯ

ಇವಲ್ಲದೆ ಮಹಾಭಾರತ ತಾತ್ಪರ್ಯ ನಿರ್ಣಯವೆಂಬ ತಮ್ಮ ಉದ್ಗ್ರಂಥದಲ್ಲಿ "ಮಹಾತ್ಮಜ್ಞಾನ ಪೂರ್ವಸ್ತು ಸ್ನೇಹಃ ಸುದೃಢಃ ಸರ್ವತ್ಯೋಧಿಕಃ" - ಮಹಾತ್ಮಜ್ಞಾನ ಮುಂದಾಗಿ ದೃಢವಾದ, ಸರ್ವಶಃ ಅಧಿಕವಾದ ಸ್ನೇಹವೇ ಭಕ್ತಿ ಎಂಬುದಾಗಿ ಭಕ್ತಿಗೆ ಒಂದು ಉತ್ಕೃಷ್ಟ ನಿರೂಪಣೆಯನ್ನೇ ಮಧ್ವಾಚಾರ್ಯರು ನೀಡಿದ್ದಾರೆ. ಅವರ ಅಭಿಪ್ರಾಯದಂತೆ ಭಕ್ತಿಯೆನ್ನುವುದು ಮುಕ್ತರಿಗೆ ಸಾಧನವಲ್ಲ ಸುಖರೂಪ

ಮಧ್ವಾಚಾರ್ಯರ ಈ ದ್ವೈತ ಸಿದ್ಧಾಂತ - ತತ್ವವಾದ - ಹರಿಸರ್ವೋತ್ತಮತ್ವವನ್ನು ಮುಂದೆ ತಮ್ಮ ಬದುಕಿನುದ್ದಕ್ಕೂ ಅನುಸರಿಸಿ ಅದನ್ನೇ ವ್ರತವೆಂದು ನಡೆಸಿದ ಮಹನೀಯರು ಕರ್ನಾಟಕದ ಹರಿದಾಸರು-ಹರಿಯ ದಾಸರು (ಹರಿದಾಸ - ಸದಾಹರಿ) ಹರಿಯ ಅನುಪಮ ಭಕ್ತ ಚೇತನರು

ಹರಿದಾಸರಲ್ಲಿ ಮಠಾಧೀಶರೂ ಮಠಾದಿಪತಿಗಳೂ ಇದ್ದರೆಂಬುದು ಸರ್ವವಿದಿತ, ಹಾಗೂ ಇದು ಪ್ರಿಯವಾದ ಸಂಗತಿ ಕೂಡ ಮುಳಬಾಗಿಲಿನ ಶ್ರೀಪಾದರಾಜರಿಂದ ಪ್ರವರ್ತಿತ - ಪರಿಷ್ಕರಣಗೊಂಡ ಹರಿದಾಸ ಸಾಹಿತ್ಯ - ಹರಿದಾಸ ಪರಂಪರೆ ಒಂದು ಆಂದೋಲನ - ಭಕ್ತಿಯ ಆಂದೋಲನವಾಗಿಯೇ ಮುಂದುವರೆದಿದೆ ಹರಿದಾಸ ದೀಕ್ಷೆ - ಅಂಕಿತ ನೀಡುವಿಕೆ, ಮಾಧ್ವ ಮಠಗಳಲ್ಲಿ ಸಮಾಜದಲ್ಲಿ ಇಂದೂ ಕಂಡು ಬರುತ್ತಿದೆ

ಹರಿದಾಸ ಪರಂಪರೆಯಲ್ಲಿ ಹೃದಯ ಸ್ವರೂಪವಾದ ಈ ಶ್ಲೋಕ ಪ್ರಚಲಿತವಾಗಿದ್ದು ಎಲ್ಲರಿಗೂ ಪ್ರಾತಃಸ್ಮರಣೀಯವಾಗಿದೆ

ನಮಃ ಶ್ರೀಪಾದರಾಜಾಯ
ನಮಸ್ತೇ ವ್ಯಾಸಯೋಗಿನೇ
ನಮಃ ಪುರಂದರಾರ್ಯಾಯ
ವಿಜಯಾರ್ಯಾಯತೇ ನಮಃ

- ಈ ಶ್ಲೋಕವನ್ನು ರಚಿಸಿದ ಮಹಾನುಭಾವರು ಯಾರೇ ಆಗಿರಲಿ, ಒಟ್ಟು ಹರಿದಾಸ ಹೃದಯವೇ ಇಲ್ಲಿದೆ ಎಂದು ಹೇಳಬಹುದು ಹೃದಯದಲ್ಲಿ ನಾಲ್ಕು ಅಂಕಣಗಳಿದ್ದು ಎರಡು ಹೃತ್ಕರ್ಣ ಎರಡು ಹೃತ್ಕುಕ್ಷಿ ಇರುವಂತೆಯೇ ಮಠಾಧೀಶರಾಗಿಯೂ ಹರಿದಾಸರಾದ ಪೂಜ್ಯ ಶ್ರೀಪಾದರಾಜರು, ವ್ಯಾಸರಾಯರು ಹೃತ್ಕರ್ಣಗಳಾದರೆ ದಾಸವರೇಣ್ಯರಾದ ಪುರಂದರ ದಾಸರು ವಿಜಯದಾಸರು ಹೃತ್ಕುಕ್ಷಿಗಳೆನಿಸುತ್ತಾರೆ ಈ ಹೃದಯ ಸರ್ವಥಾ ಸ್ಪಂದಿಸುತ್ತಲೇ ಇರಬೇಕು ಸಮಾಜ ಶರೀರವೆಂಬುದರ ಸ್ವಾಸ್ಥ್ಯ ಕಾಪಾಡುತ್ತಲೇ ಇರಬೇಕು ಇನ್ನು ಈ ಹೃತ್ಸ್ವರೂಪರ ಪರಿಚಯ ಮಾಡಿಕೊಳ್ಳಬಹುದು

**ಈಗಿನ ಮುಳಬಾಗಿಲು** - ಹಿಂದಿನ ಮೂಡಬಾಗಿಲು. ತಿರುಪತಿ ತಿರುಮಲೆಯ ಶ್ರೀನಿವಾಸನ ದರ್ಶನಕ್ಕಾಗಿ ಹೋಗಿಬರುವ ಯಾತ್ರಿಕರೆಲ್ಲರೂ ಮುಳಬಾಗಿಲು ಪ್ರಾಣದೇವರ ದರ್ಶನ ಮಾಡದೆ ಇರುವುದಿಲ್ಲ. ಅದೇ ರೀತಿ ಮಧ್ವ ಸಂಪ್ರದಾಯದ ರುಚಿಯರಿತ ಸಹೃದಯ, ಮುಳಬಾಗಿಲಿಗೆ ಅನತಿ ದೂರದಲ್ಲೇ ಇರುವ ನೃಸಿಂಹತೀರ್ಥ - ಶ್ರೀಪಾದರಾಜರ ಬೃಂದಾವನ ಸಂದರ್ಶಿಸದೆ ಬರದು. ವಿಜಯನಗರದ ಸಾಳುವ ನರಸಿಂಹರಾಯ ಶ್ರೀಪಾದರಾಜರ ಪರಮಭಕ್ತ ಶ್ರೀಪಾದರಾಯರಿದ್ದದ್ದು ಕ್ರಿ ಶ 1404 - 1502 ರಲ್ಲಿ ತಿರುಮಕೂಡಲು ನರಸೀಪುರದ ಸಮೀಪದ ಬನ್ನೂರಿನಲ್ಲಿ ಹುಟ್ಟಿ ಬಂದು ವಿಜಯನಗರದ (ಹಂಪಿಯ) ಶ್ರೀಕೃಷ್ಣದೇವರಾಯನ ಆಸ್ಥಾನ ಗುರುಗಳಾಗಿ ಬೆಳಸಿ ರಾಯನಿಗೊದಗಿದ ಪಲ್ಲಿ ಯೋಗಬಾಧೆಯನ್ನು ನಿವಾರಿಸಲು ತಾವೇ ಸಿಂಹಾಸನವನ್ನೇರಿ ವ್ಯಾಸಕೂಟ ದಾಸಕೂಟಗಳನ್ನು ಸಂಘಟಿಸಿ, ಬೆಳೆಸಿದ ಸಹೃದಯ ತಾಪಸಿ ವ್ಯಾಸರಾಜರು ಇವರಿದ್ದದ್ದು ಕ್ರಿಶ 1447 - 1539 ರ ಅವಧಿಯಲ್ಲಿ, ಅದೇ ತೆರನಾಗಿ, ದೂರದ ಪುರಂದರಗಢವೋ, ಎಲ್ಲಿಯವರೇ ಇರಲಿ, ಒಟ್ಟಿನಲ್ಲಿ ಕನ್ನಡನಾಡಿನಲ್ಲಿದ್ದು ದಾಸಸಾಹಿತ್ಯ ಕರ್ನಾಟಕ ಸಾಹಿತ್ಯಗಳೆರಡಕ್ಕೂ ಪರಮ ಉಪಕಾರ ಮಾಡಿದ ಪುರಂದರದಾಸರು ಕ್ರಿ ಶ 1484 - 1564 ರಲ್ಲಿದ್ದಂತೆ, ದೂರದ ಉತ್ತರ ಕರ್ನಾಟಕದ ಚೀಕಲಪರಿವಿ ಚಿಪ್ಪಗಿರಿಯ ವಿಜಯದಾಸರು ಮಹಾ ಅನುಭಾವಿಸಂತರಾಗಿ ಹರಿದಾಸರ ಹಿರಿಯ ಪಂಕ್ತಿಯ ಯೋಗಿವರರು ಅವರ ಜೀವನದವಧಿ - ಕ್ರಿಶ 1687 - 1755 (ಈ ವೇಳೆಗಾಗಲೇ ಕ್ರಿಶ 1596 ರಿಂದ 1671 ರ ವರೆಗೆ ಬಾಳಿ ಬೆಳಗಿ, ಶ್ರೀಹರಿಯನ್ನು ಸ್ತುತಿಸಿದ ಧೀರವೇಣುಗೋಪಾಲ ಅಂಕಿತ ಒಂದು ಕನ್ನಡ ಕೀರ್ತನೆಯನ್ನೂ ನೀಡಿರುವ ಮಂತ್ರಾಲಯದ ಪರಮ ಪೂಜ್ಯ ರಾಘವೇಂದ್ರ ತೀರ್ಥರು ವೃಂದಾವನಸ್ಥರಾಗಿದ್ದರು) ಈ ರೀತಿಯಾಗಿ ಮೇಲೆ ಉದ್ಧರಿಸಿದ ಶ್ಲೋಕದಲ್ಲಿ ಕ್ರಿ ಶ 1404 ರಿಂದ ಕ್ರಿ ಶ 1755 ರವರೆಗೆ ಇದ್ದು ಬೆಳಗಿದ ಹರಿದಾಸ ಮಹನೀಯರ ದಿವ್ಯಸ್ಮರಣೆ ಇದೆ ಇಲ್ಲಿ ಉದ್ಧೃತರಾಗಿರುವವರೂ ಭಕ್ತ ಭಗವಂತನ ನಡುವೆ ದಿವ್ಯಸೇತುವೆಗಳಾಗುತ್ತಾರೆ. ಈ ಹರಿದಾಸ ಪರಂಪರೆ ಮತ್ತೆ ಮುಂದುವರೆಯಿತು ಹರಿದಾಸರು ಯಾಯವಾರ ಮಧುಕರವೃತ್ತಿ ಮಾಡುವುದು ವಿರಳವೆನ್ನಿಸಿದೆಯಾದರೂ ಅಂಕಿತ ನೀಡುವಿಕೆ ಇನ್ನೂ ಮುಂದುವರಿದಿದೆ ಇದನ್ನು ಸಂಪ್ರದಾಯಸ್ಥರು ಬಲ್ಲರು

ಈ ಶ್ಲೋಕದಲ್ಲಿ ಉದ್ಧೃತರಾದವರ ಬಗ್ಗೆ ತಿಳಿಯುವುದೇ ಲೇಖನದ ಉದ್ದೇಶ ಧ್ಯೇಯ ಇವರ ಜೊತೆ ಐದು ಶತಮಾನಗಳ ಅವಧಿಯಲ್ಲಿ ಇನ್ನೂರಕ್ಕೂ ಹೆಚ್ಚು ಹರಿದಾಸರು ಅವರ ವೈವಿಧ್ಯಮಯ ರಚನೆಗಳಿಂದ - ಮುಖ್ಯವಾಗಿ ಕೀರ್ತನೆಗಳಿಂದ ಕನ್ನಡ ನಾಡು - ನುಡಿ - ಪರಂಪರೆಯನ್ನು ಶ್ರೀಮಂತವಾಗಿಸಿರುವುದಲ್ಲದೆ ಕನ್ನಡ ಸಾಹಿತ್ಯೇತಿಹಾಸದಲ್ಲಿಯೇ ದಾಸಸಾಹಿತ್ಯವು ಒಂದು ಪ್ರಮುಖ ಘಟ್ಟವೆನ್ನಿಸಲು ಕಾರಣೀಭೂತರಾಗಿದ್ದಾರೆ ದ್ವೈತ ಸಿದ್ಧಾಂತದ ಅಧ್ಯಯನ - ಪ್ರಚಾರ ಹರಿಸರ್ವೋತ್ತಮತ್ವ

ಪ್ರತಿಪಾದನೆ, ಭಕ್ತಿ ಪಂಥದ ಬೆಳವಣಿಗೆ, ಕರ್ನಾಟಕ ಸಂಗೀತದ ಶ್ರೀಮಂತಿಕೆ - ಹೀಗೆ ಹರಿದಾಸರ ಕೊಡುಗೆ ಈ ಎಲ್ಲ ನಿಟ್ಟಿನಲ್ಲೂ ಅವಿಸ್ಮರಣೀಯ

ಹರಿದಾಸರಲ್ಲಿ ಆದ್ಯಪ್ರವರ್ತಕರೆನ್ನಲಾದ ಶ್ರೀಪಾದರಾಜರು ತಮ್ಮ ಬಾಲ್ಯದ ದಿನಗಳನ್ನು ಬೆಂಗಳೂರು ಚೆನ್ನಪಟ್ಟಣದ ಸಮೀಪದ ಅಬ್ಬೂರಿನಲ್ಲಿ ಕಳೆದರೂ ಅನಂತರ ಪದ್ಮನಾಭತೀರ್ಥರ ಮಠದ ಪೀಳಿಗೆಯಲ್ಲಿ ಏಳನೆಯವರಾದ ಸ್ವರ್ಣವರ್ಣ ತೀರ್ಥರ ಕೃಪಾಕಟಾಕ್ಷದಿಂದ ಸನ್ಯಾಸ ದೀಕ್ಷೆ ಪಡೆದು ಶ್ರೀರಂಗಕ್ಕೆ ತೆರಳಿ ಒಂದು ವಿಶೇಷ ಸಂದರ್ಭದಲ್ಲಿ ರಘುನಾಥತೀರ್ಥರಿಂದ ಶ್ರೀಪಾದರಾಜರೆಂಬ ಹೆಸರು ಪಡೆದು, ಅನಂತರ ಕರ್ನಾಟಕದ ಕೋಲಾರ ಸಮೀಪವಾದ ಮುಳಬಾಗಿಲಿಗೆ ಬಂದು ನೆಲೆಸಿದ್ದು ಆ ನಾಡಿನ ಪುಣ್ಯವಿಶೇಷ

ಶ್ರೀಪಾದರಾಜರು ಕನ್ನಡ ಕೀರ್ತನೆ, ದೇವರ ನಾಮಗಳನ್ನು ನಿತ್ಯಪೂಜೆ ಕೈಂಕರ್ಯದ ಪರಿಕರವನ್ನಾಗಿಸಿದರು ಪ್ರಾಯಶಃ ಅವರಿಗೆ ಶ್ರೀರಂಗದ ರಂಗನಾಥನ ಸೇವೆಯಲ್ಲಿ ನಡೆಯುತ್ತಿದ್ದ ಆಳ್ವಾರರ ನಾಲಾಯಿರ ದಿವ್ಯಪ್ರಬಂಧಗಳ ಹಾಡುವಿಕೆ ಪ್ರೇರಣೆ ನೀಡಿರುವ ಸಾಧ್ಯತೆಯಿದೆ ಏನೇ ಇರಲಿ ಶ್ರೀಪಾದರಾಜರದ್ದು ತಿಳಿಗನ್ನಡ ನುಡಿಗಟ್ಟಿನ ಅಪೂರ್ವ ರಚನೆಗಳು ಕೀರ್ತನೆ ಸುಳಾದಿ ಉಗಾಭೋಗ ದಂಡಕ ವೃತ್ತನಾಮಗಳು - ಹೀಗೆ ವಿವಿಧ ಪ್ರಕಾರಗಳಲ್ಲಿರುವ ರಚನೆಗಳು ಭಕ್ತಿರಸಸ್ಯಂದಿ ಭಾವಗೀತೆಗಳೇ ಆಗಿವೆ

ಅಪರೋಕ್ಷವನುಭೂತಿ ಪಡೆವತ್ತ ಅವರು ವಿಶೇಷ ಗಮನ ನೀಡುತ್ತಾರೆ

ಸಕಲ ಶಾಸ್ತ್ರ ಕಲಾಪ ಸನ್ಯಾಸ ಕುಲದೀಪ
ಸಕಲಸತ್ವ ಸ್ಥಾಪ ಸುಜ್ಞಾನದೀಪ
ಪ್ರಕಟ ಪಾವನ ರೂಪ
ನಿಕಟ ವರ್ಜಿತ ಪಾಪ ಕೀರ್ತಿ ಪ್ರತಾಪ

- ಎಂದೇ ವ್ಯಾಸರಾಯರು ತಮ್ಮ ಗುರುವರ್ಯರಾದ ಶ್ರೀಪಾದರಾಜರನ್ನು ಕುರಿತು ಹಾಡಿದ್ದಾರೆ ಶ್ರೀಪಾದರಾಜರು ಧ್ರುವಾಂಶ ಸಂಭೂತರು, ಶುದ್ಧ ಪುರುಷರೆಂದೇ ವಿಖ್ಯಾತಿ ಒಟ್ಟಾರೆ ತೊಂಬತ್ತೆಂಟು ವರ್ಷದ ನಿಡಿದಾದ ಬದುಕು ರಂಗವಿಠಲ ಶ್ರೀಪಾದರ ಅಂಕಿತ ಸುಖ ಬಂದಾಗ ಹಿಗ್ಗದೆ, ದುಃಖ ದಾವಾನಲ ದಹಿಸುವಾಗ ಕುಗ್ಗಿ ಕೃಶವಾಗದಂತೆ ಇರಬೇಕಾದರೆ ಭಗವಂತನೇ ಹೊಣೆ ಎಂಬುದು ಶ್ರೀಪಾದರ ಸಿದ್ಧಾಂತ

ಇಟ್ಹಾಂಗೆ ಇರುವೆನೊ ಹರಿಯೆ
ಎನ್ನ ದೊರೆಯೇ
ಸೃಷ್ಟಿವಂದಿತ ಪಾದ ಪದುಮ ಶ್ರೀಹರಿಯೇ
ಸಣ್ಣ ಶಾಲ್ಯೋದನ ಬೆಣ್ಣೆಕಾಸಿದ ತುಪ್ಪ
ಚಿನ್ನ ಹರಿವಾಣದಲಿ ಭೋಜನ
ಘನ್ನ ಮಹಿಮ ನಿನ್ನ ಕರುಣ ತಪ್ಪಿದ ಮೇಲೆ ಕ
ದನ್ನ ಕಾಣದೆ ಬಾಯ್ಬಿಡಿಸುವೆ ಹರಿಯೇ

- ಇಲ್ಲಿ ಭಗವಂತನ ಕೃಪೆಯಿಂದೊದಗಿ ಬರುವ ಸುಖದಂತೆಯೇ ಮುಂದಿನ ಸಾಲುಗಳಲ್ಲಿ ಆ ಕೃಪೆ ತಪ್ಪಿದರೆ - ಚರಣ ರಕ್ಷೆ ದೊರೆಯದು ಎಂದೂ ತಿಳಿಸಿ ಶ್ರೀಹರಿ ಧ್ಯಾನ ಎಲ್ಲದಕ್ಕೂ ಒಳ್ಳೆಯದೆಂದು ತಿಳಿಸುತ್ತಾರೆ

ಶ್ರೀಪಾದರಾಜರ ಅನೇಕ ಕೃತಿಗಳು ಗೇಯ ಕಾವ್ಯಗಳೇ ಆಗುತ್ತವೆ 'ಕಂಗಳಿದ್ಯಾತಕೊ ಕಾವೇರಿ ರಂಗನ ನೋಡದ', ತಿರುಪತಿಯ ಶ್ರೀನಿವಾಸನನ್ನು ಕುರಿತಾದ, 'ಭೂಷಣಕ್ಕೆ ಭೂಷಣ ಇದು ಭೂಷಣ', 'ಶೇಷಗಿರಿವಾಸ ಶ್ರೀವರದ ವೆಂಕಟೇಶ', 'ಪದುಮನಾಭನ ನೋಡುವ ಬನ್ನಿ' ಎಂಬ ಕೀರ್ತನೆಗಳಂತೂ ತುಂಬ ಜನಪ್ರಿಯ ಆಗಿವೆ ಭಕ್ತನ ಆತ್ಮಶೋಧನೆ, ವಾತ್ಸಲ್ಯಭಕ್ತಿ, ಮಧುರಭಾವ ನಿರೂಪಣೆ, ದ್ವೈತ ತತ್ವ ಪ್ರತಿಪಾದನೆ, ರುಕ್ಮಿಣೀ ಸತ್ಯಭಾಮೆ ಇವರ ಸಲ್ಲಾಪ - ಎಲ್ಲದರಲ್ಲಿಯೂ ಶ್ರೀಪಾದರಾಜರ ಅಗ್ರಗಣ್ಯರೆ ಮಧ್ವಾಚಾರ್ಯರನ್ನು ಕುರಿತು ಹಾಡಿರುವ ಮಧ್ವನಾಮ ಹರಿದಾಸ ಸಾಹಿತ್ಯದಲ್ಲಿಯೇ ಪ್ರಶಸ್ತ ಹಾಗೂ ಸುಪ್ರಸಿದ್ಧ ಇದಕ್ಕೆ ಜಗನ್ನಾಥ ದಾಸರ 'ಫಲಸ್ತುತಿ' ಪ್ರಶಂಸೆಯೂ ಇದೆ.

ಕೆಲವೊಮ್ಮೆ ಪುರಾಣಗಳ ಕೆಲವು ಶ್ಲೋಕಗಳನ್ನೇ ಶ್ರೀಪಾದರಾಜರು ಸುಂದರವಾಗಿ ಕನ್ನಡಿಸುತ್ತಾರೆ ವಿಷ್ಣುಪುರಾಣದ ಒಂದು ಶ್ಲೋಕವನ್ನು ರಾಜರು ಉಗಾಭೋಗದಲ್ಲಿಟ್ಟಿದ್ದೂ ಹೀಗಿದೆ

ಧ್ಯಾನವು ಕೃತಯುಗದಿ
ಯಜನ ಯಜ್ಞವು ತ್ರೇತಾಯುಗದಿ
ದಾನವಾಂತಕನ ದೇವತಾರ್ಚನೆ
ದ್ವಾಪರ ಯುಗದಿ
ಮಾನವರಿಗೆಷ್ಟು ಫಲವೊ
ಅಷ್ಟು ಫಲವು ಕಲಿಯುಗದಿ
ಗಾನದಲಿ ಕೇಶವನೆಂದೆನಲು
ಕೈಗೊಳ್ಳುವನು ರಂಗವಿಠಲ

ವಾಯುಸ್ತುತಿಯ ಒಂದು ಶ್ಲೋಕವನ್ನು ಕನ್ನಡಿಸಿರುವ ರೀತಿಯಲ್ಲಿದೆ-

ಬರುವುದು ಬುದ್ಧಿಯು ಬಲವು ಕೀರ್ತಿಯು
ನಿರುತದಿ ಧೈರ್ಯವು ನಿರ್ಭಯತ್ವವು
ಅರೋಗಾನಂದ ಅಜಾತ್ಯ ವಾಕ್ಪಟುತ್ವವು
ಹರೇ ರಂಗ ವಿಠಲ ಹನುಮಾ ಎನಲು

ಬುದ್ಧಿರ್ಬಲಂ ಯಶೋ ಧೈರ್ಯಂ
ನಿರ್ಭಯತ್ವಂ ಅರೋಗತಾ
ಅಜಾತ್ಯಂ ವಾಕ್ಪಟುತ್ವಂ ಚ
ಹನುಮಾತ್ ಸ್ಮರಣಾದ್ ಭವೇತ್

ತಮ್ಮ ಗುರುಗಳಾದ ಶ್ರೀಪಾದರಾಜರ ಕಾರ್ಯವನ್ನು ಮುಂದುವರಿಸಿ, ವ್ಯಾಸಕೂಟ ದಾಸಕೂಟಗಳನ್ನು ಸಂಘಟಿಸಿ, ಪೋಷಿಸಿ ಎಲ್ಲರನ್ನು ತೊಡಗಿಸಿಕೊಂಡ ತಪಸ್ವಿಗಳು ಮಠಾಧೀಶರಾಗಿದ್ದ ವ್ಯಾಸರಾಜರು ಇವರ ಕಾಲದಲ್ಲಿಯೇ ಪುರಂದರದಾಸರು, ಕನಕದಾಸರು, ಬೇಲೂರಿನ ವೈಕುಂಠದಾಸರು ಅನಂತರ ಸೋದೆಗೆ ತೆರಳಿದ ವಾದಿರಾಜರು - ಮೊದಲಾದ ಹರಿದಾಸರಲ್ಲದೆ, ದಾಸಸಾಹಿತ್ಯಕ್ಕೆ ವ್ಯಾಸರಾಯರು ನೀಡಿದ ಕೊಡುಗೆಯೂ ಅಪೂರ್ವ

ಸಂಸ್ಕೃತದಲ್ಲಿ ನ್ಯಾಯಾಮೃತ, ತರ್ಕತಾಂಡವ, ಚಂದ್ರಿಕಾ - ವ್ಯಾಸರಾಯರ ಅದ್ವಿತೀಯ ಕೃತಿಗಳೆನಿಸಿ, ಅವರನ್ನು ಚಂದ್ರಿಕಾಚಾರ್ಯರೆನಿಸಿದಂತೆ, ಅವರು ರಚಿಸಿರುವ ನೂರಾರು ಕನ್ನಡ ಕೃತಿಗಳು ಅಷ್ಟೇ ಸೊಗಸಾಗಿವೆ ಭಕ್ತಕವಿ ಕನಕದಾಸರನ್ನು ತಮ್ಮೊಂದಿಗೆ ಆಧ್ಯಾತ್ಮ ಚಿಂತನ - ಸಮಾಲೋಚನೆಗಳಲ್ಲಿ ಸೇರಿಸಿಕೊಳ್ಳುತ್ತಿದ್ದುದು ವ್ಯಾಸರಾಯರ ಸಮದರ್ಶಿತ್ವಕ್ಕೆ ಸಹೃದಯತೆಗೆ ಸಾಕ್ಷಿ.

ರಂಗಯ್ಯ ಮನೆಗೆ ಬಂದರೆ
ಅಂತರಂಗದಿ ಗುಡಿಕಟ್ಟಿ ಕುಣಿವೆ

- ಎಂಬ ಮನೋಧರ್ಮದಂತೆಯೇ,

ಏನು ಸುಖವೊ ಎಂಥ ಸುಖವೊ
ಹರಿಯ ಧ್ಯಾನ ಮಾಡುವರ ಸಂಗ

- ಎಂಬುವುದೂ ಹೃದ್ಯವೆನಿಸುತ್ತದೆ ದಾಸರೆಂದರೆ ಪುರಂದರ ದಾಸರಯ್ಯ - ಎಂದು ಲೋಕ - ಲೋಗರಿಗೆ ಪುರಂದರ ಘನತೆಯನ್ನು ತೋರಿಸಿಕೊಟ್ಟಿದ್ದಾರೆ ನಂಬಿಕೆಟ್ಟವರಿಲ್ಲವೊ ರಂಗಯ್ಯನ, ಗಜಮುಖನೆ ಸಿದ್ಧಿದಾಯಕನೆ ವಂದಿಪೆ ಶರಣು, ಎಂಬ ಗಣಪತಿಯ ಸ್ತುತಿ, ಶ್ರೀಕೃಷ್ಣ ಲೀಲೆಯ ಚಿತ್ರಣಗಳು - ರಂಗಬಂದ ಬೃಂದಾವನದಲಿ ನಿಂದ ಕೊಳಲಿನ ಧ್ವನಿ ಬಹುಚೆಂದ, ಕೊಳಲನೂದುವ ಚದುರನ್ಯಾರೆ ಪೇಳಮ್ಮಯ್ಯ - ಎಂಬ ಕೀರ್ತನೆಗಳು, ಅನೇಕ ಸುಳಾದಿಗಳು ವ್ಯಾಸರಾಯರ ಕವಿಹೃದಯ ಕವಿತಾ ಚಮತ್ಕೃತಿಗೆ ಉದಾಹರಣೆಯಾಗುತ್ತವೆ

ಜಾರತ್ವವನು ಮಾಡಿದ ದೋಷಗಳಿಗೆಲ್ಲ
ಗೋಪೀ ಜನ ಜಾರನೆಂದರೆ ಸಾಲದೇ

ನೀರಿಲ್ಲದ ಬಾವಿ ಊರಿಲ್ಲದ ಮರವು
ನೆರಳಿಲ್ಲದ ಫಲವಿಲ್ಲದ ಮರ

ಮೊದಲಾದ ಉಗಾಭೋಗ ಹಾಡಲೂ ಮನನ ಗೈಯ್ಯಲೂ ಹಿತವೊದಗಿಸುತ್ತವೆ

ವ್ಯಾಸಕೂಟ ಸಂಸ್ಕೃತಪ್ರಿಯ ಪಂಡಿತರ ಗೋಷ್ಠಿಯಾದಂತೆಯೇ ದಾಸಕೂಟ ಹರಿದಾಸರ ಹರಿಭಕ್ತರ ಗೋಷ್ಠಿಯಾಗಿ, ಕನ್ನಡ ನುಡಿ ಸಂಪದ ಹೆಚ್ಚಿಸಿದ ದಾಸಸಾಹಿತ್ಯ ಬೆಳೆಯಲು ಕೇಂದ್ರ ಬಿಂದುವೆನಿಸಿತಷ್ಟೆ. ಪುರಂದರದಾಸರನ್ನು ಕುರಿತಂತೆ ಇಲ್ಲಿ ಎಷ್ಟು ತಿಳಿಸಿದರೂ ಅದು ಅವರ ವ್ಯಕ್ತಿತ್ವದ ಬಗ್ಗೆ ತುಂಬ ಕಡಿಮೆಯೇ ಆಗುತ್ತದೆ 'ಕರ್ನಾಟಕ ಸಂಗೀತ ಪಿತಾಮಹ'ರು ಎಂದಂತೆ ಆದದ್ದೆಲ್ಲ ಒಳಿತೇ ಆಯಿತು, ಹೆಂಡತಿ ಸಂತತಿ ಸಾವಿರವಾಗಲಿ ದಂಡಿಗೆ ಬೆತ್ತ ಹಿಡಿಸಿದಳಯ್ಯ ಎಂದು ಹಾಡುತ್ತ ಊರೂರು ತಿರುಗಿದ ಶ್ರೀಹರಿ ಪ್ರಸಾದಯೋಗವನ್ನು ಅನುಭವಿಸಿದ ಹಿರಿಯರು ಪುರಂದರದಾಸರು ಅವರ ಕೀರ್ತನೆಗಳನ್ನು ಪುರಂದರೋಪನಿಷತ್ತು ಎಂದೇ ಗುರು ವ್ಯಾಸರಾಯರು ಪ್ರಶಂಸಿಸಿದರು ಎಂಬುದು ಐತಿಹ್ಯ 'ಬಿನ್ನಹಕೆ ಬಾಯಿಲ್ಲವಯ್ಯ ಅನ್ನಂತ ಅಪರಾಧ ಎನ್ನಲ್ಲಿ ಇರಲಾಗಿ', 'ಜಗದೋದ್ಧಾರನ ಆಡಿಸಿದಳೆ ಶೋದೆ', 'ಲಾಲಿಸಿದಳು ಮಗನ', 'ಜಯ ಜಾನಕೀಕಾಂತ', 'ನಗೆಯು ಬರುತಿದೆ', 'ಮಡಿ ಮಡಿಯೆಂದು ಅಡಿಗಡಿಗ್ಹಾರುತಿ', 'ನೋಡುವುದೇ ಕಣ್ಣು', 'ಕರುಣಾಕರ ನೀನೆಂಬುವುದೇತಕೋ ಭರವಸೆಯಿಲ್ಲೆನಗೆ', 'ಎಂಥಾ ಪುಣ್ಯವೇ ಗೋಪಿ', 'ಎಂಥ ಭಾಗ್ಯವೇ ಯಶೋದೆ', 'ಎನಗೂ ಆಣೆ ರಂಗ ನಿನಗೂ ಆಣೆ', 'ನೀನ್ಯಾಕೋ ನಿನ್ನ ಹಂಗ್ಯಾಕೋ', 'ಉದರವೈರಾಗ್ಯವಿದು', 'ಧರ್ಮವೆ ಜಯವೆಂಬ ದಿವ್ಯಮಂತ್ರ', 'ಈಸಬೇಕು ಇದ್ದು ಜೈಸಬೇಕು', 'ಮಾನವ ಜನ್ಮದೊಡ್ಡದು - ಇದ ಹಾನಿಗೊಳಿಸಬೇಡಿ ಹುಚ್ಚಪ್ಪಗಳಿರಾ', 'ಬಲಿಯ ಮನೆಗೆ ವಾಮನ ಬಂದಂತೆ', (ಉಗಾಭೋಗ) - ಇಲ್ಲೆಲ್ಲ ವೇದಾಂತ ತತ್ವಸಾರ, ಸಾಹಿತ್ಯ ಸಂಗೀತದ ಸ್ವಾರಸ್ಯ - ಸಾಮರಸ್ಯ ಎಲ್ಲವೂ ತಾನಾಗಿ ವಿಜೃಂಭಿಸುತ್ತವೆ

ವ್ಯಾಸ ರಾಯರಂತೆಯೇ ಸ್ಮರಣೆಗೆ ಬರುವ ಮಹಾಮಹಿಮರೆಂದರೆ ಸೋದೆಯ ವಾದಿರಾಜ ಸ್ವಾಮಿಗಳು ಅವರ ದಿವ್ಯವ್ಯಕ್ತಿತ್ವ, ಮಠಾಧೀಶರಾಗಿ ಇವರು ಅನೇಕ ವರ್ಣದವರನ್ನು ತಮ್ಮ ವೈಷ್ಣವ ದೀಕ್ಷೆಗೆ ಸೇರಿಸಿಕೊಂಡು ಸಮಾಜ ಸುಧಾರಕರಾಗಿ, ಹರಿದಾಸರಾಗಿ, ಗೆಜ್ಜೆಕಟ್ಟಿ ಹೆಜ್ಜೆಹಾಕಿ, ಶ್ರೀಹರಿಯನ್ನು ಹಯವದನ ರೂಪದಲ್ಲಿ ಸಾಕ್ಷಾತ್ಕರಿಸಿಕೊಂಡು, ನೂರಿಪ್ಪತ್ತು ವತ್ಸರ ನಿಡಿದಾದ ಸಾರ್ಥಕ ಯೋಗಿ ಜೀವನ ನಡೆಸಿದ ಧೀಮಂತರು ಭಾವೀ ಸಮೀರರೆಂದು ಹೆಸರಾದ ವಾದಿರಾಜರು (ಕ್ರಿ ಶ 1480 - 1600) ಸಂಸ್ಕೃತ, ಕನ್ನಡದಲ್ಲಿ ಪ್ರಭುತ್ವವುಳ್ಳವರಾಗಿದ್ದರು ತುಳುವಿನಲ್ಲಿಯೂ ಹಾಡಿದ್ದಾರೆ

ಕನಕದಾಸ - ಕನಕಣ್ಣ ಹರಿದಾಸರಲ್ಲಿ ಕವಿಗಳು ಕನಕನನ್ನು ಕೆಣಕಬೇಡ ಕೆಣಕಿ ತಿಣುಕಬೇಡ ಎಂಬ ನಾಣ್ನುಡಿಯಿದೆ ಅದಕ್ಕೆ ಒಪ್ಪುವ ಸಂತ, ಅಪರೋಕ್ಷಜ್ಞಾನಿ ಕನಕದಾಸರು ನಮ್ಮಮ್ಮ ಶಾರದೆ ಉಮಾ ಮಹೇಶ್ವರಿ ಎಂಬುವ ಗಣಪತಿ ಸ್ತುತಿಯಲ್ಲಿ ರಾಶಿವಿದ್ಯವ ಬಲ್ಲ ರಮಣಿ ಹಂಬಲಸೊಲ್ಲ - "ಭಾಷಿಗ" ನಿವನ್ಯಾರಮ್ಮ ಎಂಬ ಪದ ಬಳಕೆ ಅದೆಷ್ಟು ಧ್ವನ್ಯಾತ್ಮಕ ಭಾಷಿಗ ಎಂಬುದಕ್ಕೆ ಭಾಷಾಶಾಸ್ತ್ರಜ್ಞ ಎಂದರ್ಥ ಕನಕದಾಸರ ಕಾವ್ಯಸೃಜನೆ ಕೀರ್ತನೆಗಳಂತೆಯೇ ಅವರ ಮುಂಡಿಗೆಗಳೂ ಶ್ರೇಷ್ಠವೇ ಅವರಿಗೇ ಸಿದ್ಧಿಸಿರುವ ಕೆಲವು ನುಡಿಗಟ್ಟು, ಪ್ರಯೋಗಗಳಾಗಿವೆ ಈ ಒಗಟುಗಳು ಮೋಹನ ತರಂಗಿಣಿ, ನಳಚರಿತ್ರೆ, ರಾಮಧಾನ್ಯಚರಿತ್ರೆ, ಹರಿಭಕ್ತಿಸಾರ - ಮುಂತಾದೆಡೆ ಅವರು ಕವಿಯಾಗಿ ಕ್ರಾಂತದರ್ಶಿಯಾಗಿ, ತೋಳಗಿರುವ ಪರಿ ದಾಸ ಸಾಹಿತ್ಯವನ್ನು ಅಮರವಾಗಿಸುತ್ತದೆ

ಹರಿದಾಸರು ಅವರ ಸಾಹಿತ್ಯ ಬದುಕು - ಎಲ್ಲವೂ ವಿಜಯನಗರ ಪತನದೊಡನೆಯೇ (1565) ಹಲವಾರು ವರ್ಷ ವಿಚ್ಛಿದ್ರಗೊಂಡು ಸ್ಥಗಿತಗೊಂಡಂತೆ ಕಂಡುಬಂದರೂ ಈ ಅಜ್ಞಾತ ಅವಧಿಯಲ್ಲಿ ಬಿಜಾಪುರದ ಕಾಖಂಡಕಿಯಲ್ಲಿ ಮಹಿಪತಿ ದಾಸರಲ್ಲಿ ಕಂಗೊಳಿಸಿ ಮುಂದುವರೆಯಿತು ಅವರ 'ಸ್ವಾನಂದ ಸಾಮ್ರಾಜ್ಯ'ದಿಂದ ನಂತರ, ಮಂತ್ರಾಲಯದಲ್ಲಿ ರಾಘವೇಂದ್ರ ತೀರ್ಥರಿಂದ ಸ್ಫೂರ್ತಿ

ವಿಜಯದಾಸರ ಮೂಲಕ ದಾಸಸಾಹಿತ್ಯದ ಎರಡನೆಯ ಹಂತವು ಮುಂದುವರಿದು ಜಗನ್ನಾಥದಾಸರ ಹರಿಕಥಾಮೃತಸಾರದಂತಹ ಮಹಾಕಾವ್ಯದೊಂದಿಗೆ ಪರಮೋನ್ನತಿಯನ್ನು ಮುಟ್ಟಿತು ಪ್ರಾಣೇಶವಿಠಲ ಮೋಹನ ದಾಸರು ಮುಂತಾದ ಹರಿದಾಸರು ಅವರ ಶಿಷ್ಯ ಪ್ರಶಿಷ್ಯರ ಮೂಲಕ ದಾಸ ಸಾಹಿತ್ಯ ಮುಂದುವರೆಯಿತು

ವಿಜಯದಾಸರು ವಿಜಯ ರಾಯರೆಂದೂ, ಸುಳಾದಿದಾಸರೆಂದೂ ಪ್ರಸಿದ್ಧರು ಭೃಗು ಋಷಿ ಅಂಶಸಂಭೂತರೆಂದೂ ಪ್ರಸಿದ್ಧಿ

ಅಜ್ಞಾನ ತಿಮಿರಾಂಧಸ್ಯ
ಬುದ್ಧಿ ಸಂಪತ್ಪ್ರದಾಯಕಂ
ವಿಜ್ಞಾನ ವಿಮಲಂ ಶಾಂತಂ
ವಿಜಯಾರ್ಯಾಯತೇ ಭಜೇ

ಎಂಬುದು ವಿಜಯದಾಸರ ಸ್ಮರಿಸುವ ಶ್ಲೋಕ, ಇವರಲ್ಲಿ ಮಧ್ವನಿಷ್ಠೆ ವೀರನಿಷ್ಠೆ ಆಯಿತು ವಿಜಯದಾಸರಲ್ಲಿ ವಿಚಾರಸರಣಿ - ವಿಚಾರ ಧಾರೆಗೇ ಪ್ರಾಧಾನ್ಯ ಅಂತೆಯೇ ಸುಳಾದಿಗಳನೇಕ (ಪ್ರಮೇಯ ಭಾಗ, ಸಾಧನ ಸುಳಾದಿಗಳು, ಸೃಷ್ಟಿ ಪ್ರಕರಣ) ಇಂದೂ ಅರ್ಥಗರ್ಭಿತ - ಅಗಮ್ಯ - ಅರ್ಥೈಸಲು ವಿಜಯದಾಸರು ಒಂದು ದೃಷ್ಟಿಯಲ್ಲಿ ಪುರಂದರ ದಾಸರ ಪರೋಕ್ಷ ಶಿಷ್ಯರೆಂದೂ ತಪ್ಪಾಗಲಾರದು ಅವರ ನೂರಾರು ಕೃತಿಗಳು - ಸುಳಾದಿಗಳು ಎಲ್ಲದರಲ್ಲಿಯೂ ತಾವು ನಂಬಿದ ಮಾಧ್ವಮತ ನಿಷ್ಠೆಗೇ ಪ್ರಾಧಾನ್ಯ

ತಿರುಪತಿಯ ಶ್ರೀನಿವಾಸ ದೇವರನ್ನು ಕುರಿತ ಒಂದು ನಿಂದಾಸ್ತುತಿ-

ತೊಳಸದಕ್ಕಿಯ ತಿಂಬ
ಕಿಲುಬು ತಳಿಗೆಯಲುಂಬ
ಕೊಳಗದಲಿ ಹಣಗಳನು ಅಳೆದುಕೊಂಬ
ಇಲ್ಲ ಕಾಸು ಎಂದು ಸುಳ್ಳು ಮಾತಾಡಿದರೆ
ಎಲ್ಲವನು ಕಸಿದು ಕೊಂಬ ಕಳ್ಳ ದೊರೆಗೆ
ಜಯ ಮಂಗಳಂ ನಿತ್ಯ ಶುಭಮಂಗಳಂ

- ಎಂಬುವ ಕೀರ್ತನೆಯಂತೂ ತುಂಬ ಜನಪ್ರಿಯವಾದದ್ದು ರಮಾದೇವಿಯರ ಸ್ತುತಿ, ಪ್ರಾಣದೇವರ ಪದ, ಸುಳಾದಿ, ಸಮಾಜ ಹಿತಚಿಂತನೆಯ ಕೀರ್ತನೆಗಳು - ಹೀಗೆ ವಿಜಯರಾಯರು ಜ್ಞಾನ-ಭಕ್ತಿ, ವೈರಾಗ್ಯ ಈ ಮೂರೂ ಗುಣಗಳನ್ನು ಮೆಚ್ಚಿಕೊಂಡು ಮೈಗೂಡಿಸಿಕೊಂಡು ನಡೆದವರು ಎನ್ನಬಹುದು

ವಿಜಯದಾಸರ ಪ್ರಿಯಶಿಷ್ಯ ಹರಿದಾಸರಾದ ಗೋಪಾಲದಾಸರು ಅವರ ತಮ್ಮಂದಿರು, ಜಗನ್ನಾಥದಾಸರು ಹಾಗೂ ಅವರ ಪಾಂಡಿತ್ಯಪೂರ್ಣ ಸಾಹಿತ್ಯಸಂಪದ-ಇವೆಲ್ಲವನ್ನೂ ವಿಸ್ತಾರ ಭಯದಿಂದ ಬರೆಯಲಾಗಿಲ್ಲ

ಮಧ್ವಾಚಾರ್ಯರ ತತ್ವವಾದ - ದ್ವೈತಸಿದ್ಧಾಂತ - ಹರಿಸರ್ವೋತ್ತಮತ್ವ, ಹರಿಭಕ್ತಿ ಪ್ರಸಾರ, ಜೊತೆಗೇ ಸಮಾಜ - ಮಾನವ - ಜೀವನದ ಸ್ವಸ್ಥಚಿಂತನ - ಇವೆಲ್ಲವನ್ನು ಧ್ಯೇಯವಾಗಿರಿಸಿಕೊಂಡು ಕೀರ್ತನ ಸಂಪದವನ್ನು ಹುಟ್ಟುಹಾಕಿದ ಹರಿದಾಸರಲ್ಲಿ ಅಗ್ರ ಪಂಕ್ತಿಯ ಕೆಲವರನ್ನು ಸ್ಮರಿಸುವ ಒಂದು ಶ್ಲೋಕವೇ ಈ ಚಿಂತನೆಗೆ ಪ್ರೇರಣೆ ಆಗಿದೆ ಜೊತೆಗೇ ಇರದೇ ಕಾದ ಮತ್ತೂ ಹಲವರ ಹೆಸರನ್ನು ಸ್ಮರಿಸಲಾಗಿದೆ

ಸಿರಿಗನ್ನಡ ಬಾಳಲಿ ಸರಸತಿಯ ಸಿರಿ ಹೆಚ್ಚಲಿ,
ನಮ್ಮ ಆನಂದತೀರ್ಥರು ಜನಮನವನು ಬೆಳಗಲಿ.

# ತೀರ್ಥಯಾತ್ರಾವಿಧಿ

ಡಿ. ಕೆ. ಸುಬ್ರಹ್ಮಣ್ಯಂ

ಭರತವರ್ಷವು ಪುಣ್ಯಭೂಮಿ ಎಂದೂ ಕರ್ಮ ಭೂಮಿ ಎಂದೂ ಜಗತ್ಪ್ರಸಿದ್ಧವಾಗಿದೆ ವಿಖ್ಯಾತ ಸುಭಾಷಿತಕಾರನಾದ ಭರ್ತೃಹರಿಯು ಹೇಳುವಂತೆ ಈ ಭೂಮಿಯಲ್ಲಿ ಜನ್ಮತಾಳಿದ ಮೇಲೂ ಯಾವ ಮಾನವನು ಪುಣ್ಯದ ಸಮುಪಾರ್ಜನೆ ಮಾಡುವುದಿಲ್ಲವೋ ಅವನ ಬದುಕು ವ್ಯರ್ಥ

ಸ್ಥಾಲ್ಯಾಂ ವೈಢೂರ್ಯ ಮಯ್ಯಾಂ
ಪಚತಿ ತಿಲಖಲಂ ಚಾಂದನೈರಿಂಧನೌಘೈಃ
ಸೌವರ್ಣೈಃ ಲಾಂಗಲಾಗ್ರೈಃ
ವಿಲಿಖತಿ ವಸುಧಾ ಮರ್ಕತೂಲಸ್ಯ ಹೇತೋಃ
ಛಿತ್ವಾ ಕರ್ಪೂರ ಖಂಡಾನ್ ವೃಧಮಿಹ
ಕುರುತೇ ಕೋದ್ರವಣಾಂ ಸಮಂತಾತ್
ಪ್ರಾಪ್ಯೇ ಮಾಂ ಕರ್ಮಭೂಮಿಂ ನ ಭಜತಿ
ಮನುಜಃ ಯಸ್ತಪೋ ಮಂದ ಭಾಗ್ಯಃ

ವೈಢೂರ್ಯಮಯ ಪಾತ್ರೆಯಲ್ಲಿ ಶ್ರೀಗಂಧವನ್ನು ಇಂಧನವನ್ನಾಗಿ ಬಳಸಿ ಎಳ್ಳಿನ ಹಿಂಡಿಯನ್ನು ಬೇಯಿಸುವುದೂ, ಬಂಗಾರದ ಕುಳವುಳ್ಳ ನೇಗಿಲಿನಿಂದ ಭೂಮಿಯನ್ನುತ್ತು ಎಕ್ಕೆಯ ಬೀಜಗಳನ್ನು ಬೆಳೆಯುವುದೂ, ಸುಗಂಧಪೂರ್ಣವಾದ ಕರ್ಪೂರವನ್ನು ಬಳಸಿ ನಿರುಪಯುಕ್ತದ್ರವವನ್ನು ತಯಾರಿಸುವುದೂ, ಹೇಗೆ ನಿರರ್ಥಕವೆನಿಸುವುದೋ ಹಾಗೆಯೇ ಭರತಖಂಡದ ಪುಣ್ಯಭೂಮಿಯಲ್ಲಿ ಜನ್ಮತಳೆದು ತಪವನ್ನಾಚರಿಸದಲ್ಲಿ ಅಂತಹ ಮನುಜನ ಜನ್ಮ ನಿಷ್ಫಲ, ಅವನಿಗಿಂತ ದೌರ್ಭಾಗ್ಯಶಾಲಿಯು ಮತ್ತಾರೂ ಇಲ್ಲ

ಈ ಭೂಮಿಯಲ್ಲಿ, ಭರತ, ಭಗೀರಥ, ಇಕ್ಷ್ವಾಕು, ಮಾಂಧಾತ, ಸಗರ, ಹರಿಶ್ಚಂದ್ರಾದಿ ರಾಜರ್ಷಿಗಳು ಜನ್ಮತಳೆದು ತಮ್ಮ ಮಂಗಳಕರ ಶಾಸನದಿಂದ ಈ ಭೂಮಿಯನ್ನಾಳಿ ಪವಿತ್ರವಾಗಿಸಿದ್ದಾರೆ. ವಶಿಷ್ಠ, ವಾಲಖಿಲ್ಯ, ವಿಶ್ವಾಮಿತ್ರ, ಅಗಸ್ತ್ಯ, ಕ್ರತು, ಪುಲಹನೇ ಮುಂತಾದ ಋಷಿಗಳು ತಮ್ಮ ತಪೋಬಲದಿಂದ ಈ ಕರ್ಮಭೂಮಿಯನ್ನು ಪಾವನಗೊಳಿಸಿದ್ದಾರೆ ಗಂಗಾ, ಯಮುನಾ, ಸರಸ್ವತಿ, ನರ್ಮದಾ, ಕಾವೇರಿ ಮುಂತಾದ, ಪುಣ್ಯನದಿಗಳ ಜಲವು ಈ ನಾಡಿನಲ್ಲಿ ಹರಿದು ಪಾವನವಾಗಿಸಿದೆ ಇಂತಹ ರಾಜರೂ, ಋಷಿಗಳೂ, ರಾಜರ್ಷಿಗಳೂ, ವಾಸಮಾಡಿದ್ದ ಕ್ಷೇತ್ರಗಳೇ ತೀರ್ಥಕ್ಷೇತ್ರಗಳು ಪುಣ್ಯನದಿಗಳೇ ಪವಿತ್ರತೀರ್ಥಗಳು ಅವುಗಳ ತೀರಗಳಲ್ಲಿ ಮಹಾತಪಸ್ವಿಗಳಿಂದ ಪ್ರತಿಷ್ಠಾಪಿತವಾದ ದೈವ ಸನ್ನಿಧಿಯೇ, ತೀರ್ಥಕ್ಷೇತ್ರಗಳು

ನೈಮಿಷವನ, ಭೃಗುವನ, ಖಾಂಡವವನ, ದಂಡಕಾವನ, ಕಾಮ್ಯಕವನ, ದ್ವೈತವನವೇ ಮುಂತಾದ ಗಹನಾರಣ್ಯಗಳು ಮಹರ್ಷಿಗಳ ಏಕಾಗ್ರ ತಪಸ್ಸಿನ, ಧ್ಯಾನ ಭೂಮಿಗಳಾಗಿದ್ದು ಪಾವನವೆನಿಸಿವೆ, ಈ ಅರಣ್ಯಗಳಲ್ಲೂ ದೇವತಾಸಾನ್ನಿಧ್ಯವಿದ್ದು, ತೀರ್ಥಕ್ಷೇತ್ರಗಳೆನಿಸಿವೆ ಕೇದಾರ, ಬದರಿ, ಪುಷ್ಕರಕ್ಷೇತ್ರ - ಮುಂತಾದವು ಅಂತಹ ತಾಣಗಳು

ಹಿಮಾಲಯ, ಮತಂಗ, ಮಾಲ್ಯವಂತ, ಹೇಮಕೂಟ, ಋಷ್ಯಮೂಕ - ಮುಂತಾದ ಪರ್ವತಗಳು ಋಷಿಗಳ, ದೇವತೆಗಳ ತಪೋಭೂಮಿಗಳಾಗಿದ್ದವು. ಹಿಮಾಲಯದಲ್ಲಿ ಶಿವನು ತಪವೆಸಗಿದರೆ, ತಿರುಮಲದಲ್ಲಿ ಶ್ರೀನಿವಾಸನು ತಪಗೈದು ನೆಲಸಿದ. ಈ ಪರ್ವತಶಿಖರಗಳೂ ಯಾತ್ರಾಸ್ಥಳಗಳೇ ಆಗಿವೆ ಹೀಗೆ ಬಹು ತೀರ್ಥಗಳ ತೀರ್ಥಕ್ಷೇತ್ರಗಳ ನಾಡು ಭರತವರ್ಷ

ದೈನಂದಿನ ಜೀವನದಲ್ಲಿ ಮಾನವ ಪುಣ್ಯ ಮತ್ತು ಪಾಪ ಎರಡನ್ನೂ ಎಸಗುತ್ತಾನೆ "ಪರೋಪಕಾರಃ ಪುಣ್ಯಾಯ ಪಾಪಾಯ ಪರಪೀಡನಂ" ಎಂಬ ವ್ಯಾಸ ವಾಣಿಯಂತೆ ಕೆಲವೊಮ್ಮೆ ನಿಃಸ್ವಾರ್ಥಬುದ್ಧಿಯಿಂದ ಪರೋಪಕಾರವೆಸಗಿ ಪುಣ್ಯಗಳಿಸಿದರೆ, ಕೆಲವೊಮ್ಮೆ ಮೇರೆಮೀರಿದ ಸ್ವಾರ್ಥಬುದ್ಧಿಯಿಂದ ಪರಪೀಡನೆಗೈದು ಪಾಪಸಮುಪಾರ್ಜನೆ ಮಾಡುತ್ತಾನೆ. ಈ ಪಾಪಪ್ರಕ್ಷಾಲನೆಯತ್ತ ಗಮನ ಬಂದಾಗ ಕೃಛ್ರಾಚರಣೆಯಿಂದಲೋ, ಯಜ್ಞಯಾಗಾದಿ ಕರ್ಮಗಳಿಂದಲೋ, ತೀರ್ಥಯಾತ್ರೆಗೈದೋ ಪಾಪ ಪ್ರಕ್ಷಾಲನೆ ಮಾಡಿಕೊಳ್ಳುತ್ತಾನೆ

ತೀರ್ಥಯಾತ್ರೆಯು ಮುಮುಕ್ಷುವಾಗಬಯಸುವವರಿಗೆ ಮತ್ತು ಕಾಮ್ಯಕರ್ಮಗಳೆಸಗಿ ಇಹಲೋಕದ ವೈಭವವನ್ನು ಬಯಸುವವರಿಗೆ - ಈರ್ವರಿಗೂ ಫಲದಾಯಕ ಕಲಿಯುಗದಲ್ಲಿ ಯಜ್ಞ ಯಾಗಾದಿಗಳನ್ನೆಸಗುವುದು ಕಷ್ಟಸಾಧ್ಯ ಅದಕ್ಕಾಗಿ ಅಪಾರವಾದ ಹಣ, ಜನಬಲ - ಇತ್ಯಾದಿಗಳು ಕಷ್ಟಸಾಧ್ಯಗಳಾದ್ದರಿಂದ, ತೀರ್ಥಯಾತ್ರೆ ಗೈದು ಆ ಫಲವನ್ನೇ ಪಡೆಯಲು ಸಾಧ್ಯ ಚಾಂದ್ರಾಯಣ, ದರ್ಶ, ಪೂರ್ಣಮಾಸಾದಿ ಕೃಛ್ರಾಚರಣೆಯ ಫಲವೂ ಸಹ ತೀರ್ಥಯಾತ್ರೆಗೈಯ್ಯುವುದರಿಂದಲೇ ದೊರೆಯುತ್ತದೆ

'ತೀರ್ಥ' ಎಂಬ ಪದ ಯಜುರ್ವೇದದ ರುದ್ರಾಧ್ಯಾಯದಲ್ಲಿ ಪ್ರಯುಕ್ತವಾಗಿದೆ "ಯೇ ತೀರ್ಥಾನಿ ಪ್ರಚರಂತಿ ಸೃಕಾವಂತೋ ನಿಷಂಗಿಣಃ" ರುದ್ರರೆಂಬ ದೇವತೆಗಳು ಸೃಕವೆಂಬ ಆಯುಧವನ್ನು ಧರಿಸಿ ತೀರ್ಥಕ್ಷೇತ್ರಗಳಲ್ಲಿ ಸಂಚರಿಸುತ್ತಿರುತ್ತಾರೆ ಎಂದು ತೀರ್ಥ ಎಂಬ ಪದಕ್ಕೆ ಪೂಜ್ಯತಮ, ಪವಿತ್ರತಮ ಎಂದರ್ಥವೂ ಆಗುತ್ತದೆ

ಭರತವರ್ಷದಲ್ಲಿರುವ ಅಸಂಖ್ಯಾತ ತೀರ್ಥಕ್ಷೇತ್ರಗಳಲ್ಲಿ ತಮ್ಮ ಮಹಿಮೆಯಿಂದಾಗಿ ಜನಾಕರ್ಷಣೆಗೈಯ್ಯುತ್ತಿರುವ ಕ್ಷೇತ್ರಗಳೆಂದರೆ ಉತ್ತರಭಾರತದಲ್ಲಿ ಪ್ರಯಾಗ, ವಾರಣಾಸಿ ಅಥವಾ ಕಾಶಿ, ಗಯಾ, ಮಧುರಾ ಮುಂತಾದವು, ದಕ್ಷಿಣಭಾರತದಲ್ಲಿ ರಾಮಸೇತುವಿನಿಂದಾಗಿ ಪ್ರಸಿದ್ಧವಾದ ರಾಮೇಶ್ವರ ಮತ್ತು ತಿರುಪತಿ (ತಿರುಮಲ) ಈ ಪುರಾಣಪ್ರಸಿದ್ಧವೂ ಪುರಾತನವೂ ಆದ ಕ್ಷೇತ್ರಗಳಿಗೆ ಹೋಗಬಯಸುವವರು ಆಚರಿಸಬೇಕಾದ ವಿಧಿವಿಧಾನಗಳು ಹೀಗಿವೆ

ತೀರ್ಥಯಾತ್ರೆಗೆ ಮುನ್ನ · ತೀರ್ಥಯಾತ್ರೆಮಾಡಲು ಸಂಕಲ್ಪಿಸಿದ ಗೃಹಸ್ಥನು ಸಂಕಲ್ಪಪುರಸ್ಸರವಾಗಿ ನಾಂದೀಶ್ರಾದ್ಧವನ್ನೆಸಗಿ ಪಿತೃದೇವತೆಗಳನ್ನು ತೃಪ್ತಿಪಡಿಸಬೇಕು ಶ್ರಾದ್ಧದಲ್ಲಿ ಹೆಚ್ಚು ತುಪ್ಪವನ್ನು ಬಳಸಿ ಬ್ರಾಹ್ಮಣರನ್ನು, ದೀನದಲಿತರೇ ಮುಂತಾದ ಆಶ್ರಿತರನ್ನು ತೃಪ್ತಿಪಡಿಸಬೇಕು. ಶ್ರಾದ್ಧ ಶೇಷವನ್ನು ಭೋಜನ ಮಾಡಿ, ಕಾರ್ಪಾಟಿಕ ವೇಷವನ್ನು ಧರಿಸಿ ಪತ್ನೀಸಹಿತನಾಗಿ ಯಾತ್ರೆ ಹೊರಡಬೇಕು ಯಾತ್ರಾಕಾಲದಲ್ಲಿ ಬರಿಗಾಲಿನಲ್ಲಿರಬೇಕು. ವೈಭವೋಪೇತವಾದ ವಸ್ತ್ರಗಳನ್ನು ಧರಿಸಬಾರದು. ವಾಹನಾದಿಗಳನ್ನು ಬಳಸಬಾರದು

ಗೋಯಾನೇ - ಗೋವಧಃ ಪ್ರೋಕ್ತೋ
ಹಯಯಾನೇ ತು ನಿಷ್ಫಲಮ್
ನರಯಾನೇ ತದರ್ಧಂಸ್ಯಾತ್
ಪದ್ಭ್ಯಾಂ ತತ್ರ ಚತುರ್ಗುಣಮ್

ಎತ್ತಿನ ಬಂಡಿಯಲ್ಲಿ ಕುಳಿತು ಪಯಣಿಸುತ್ತಾ ಯಾತ್ರೆಗೈದರೆ ಗೋವಧೆಯ ಪಾಪಕ್ಕೆ ಗುರಿಯಾಗುತ್ತಾನೆ ಕುದುರೆ ಗಾಡಿಯಲ್ಲಿ ಪ್ರಯಾಣ ಮಾಡಿ ಯಾತ್ರೆಗೈದರೆ ಯಾವಫಲವೂ ದೊರೆಯದು, ಮನುಷ್ಯರು ಹೊರುವಂತಹ ಪಲ್ಲಕ್ಕಿ ಮೇಣೆ ಮುಂತಾದವುಗಳಲ್ಲಿ ಪ್ರಯಾಣಿಸುತ್ತಾ ಯಾತ್ರೆಗೈದರೆ ಅರ್ಧದಷ್ಟು ಫಲಮಾತ್ರ. ಇನ್ನು ಕಾಲ್ನಡಿಗೆಯಲ್ಲಿ ನಡೆದು ಯಾತ್ರೆಮಾಡಿದರೆ ನಾಲ್ಕು

ಪಟ್ಟು ಫಲದೊರೆಯುವುದು ಎಂದು ಪದ್ಮಪುರಾಣದ ಶ್ಲೋಕವು ನಿರೂಪಿಸುತ್ತದೆ ತೀರ್ಥಯಾತ್ರೆಯ ಪೂರ್ಣಫಲ ದೊರೆಯದೇಕಾದರೆ ಪತ್ನೀ ಸಹಿತನಾಗಿಯೇ ಯಾತ್ರೆಮಾಡದೇಕು

ಉದ್ದೇಶಿತ ತೀರ್ಥಕ್ಷೇತ್ರವನ್ನು ಸೇರಿದ ನಂತರ ಅಲ್ಲಿನ ಅಧಿದೇವತೆಯ ಸ್ತುತಿಯ ವಿನಃ ಮತ್ತಾವ ದೇವತೆಯ ಸ್ಮರಣೆಯೂ ಸಲ್ಲದು ಆ ತೀರ್ಥಕ್ಷೇತ್ರಕ್ಕೆ ಸಂಬಂಧಿಸಿದಂತಹ ಆಚರಣೆಗಳನ್ನು ವಿಧ್ಯುಕ್ತವಾಗಿ ಆಚರಿಸದೇಕು ಉದಾಹರಣೆಗೆ ಗಯೆಯಲ್ಲಿ ಪಿತೃಶ್ರಾದ್ಧ, ಪ್ರಯಾಗದಲ್ಲಿ ವೇಣೀದಾನ ಇತ್ಯಾದಿ

ತೀರ್ಥಕ್ಷೇತ್ರಗಳಲ್ಲಿ ಮುಂಡನ ವಿಧಿ ತೀರ್ಥಕ್ಷೇತ್ರಗಳಲ್ಲಿ ಮುಂಡನವು ಕಡ್ಡಾಯವಾದ ವಿಧಿಯೇ ಎಂಬ ವಿಚಾರದಲ್ಲಿ ಪುರಾಣಗಳಲ್ಲಿ, ಸ್ಮೃತಿ ಮತ್ತು ಧರ್ಮಶಾಸ್ತ್ರಗಳಲ್ಲಿ ಏಕರೂಪವಾದ ಅಭಿಪ್ರಾಯವಿಲ್ಲ. ಆದರೂ ತೀರ್ಥಯಾತ್ರಿಗಳು - ಈ ವಿಧಿಗೆ ಒಳಗಾಗುವುದನ್ನು ಕಂಡರೆ ಅದರ ಜನಪ್ರಿಯತೆಯ ಅರಿವಾಗುತ್ತದೆ

ತೀರ್ಥೋಪವಾಸಃ ಕರ್ತವ್ಯಃ
ಶಿರಸೋ, ಮುಂಡನಂ ತಥಾ
ಶಿರೋಗತಾನಿ ಪಾಪಾನಿ
ಯಾಂತಿ ಮುಂಡನತೋಯತಃ

ಎಂಬ ಸ್ಕಾಂದಪುರಾಣದ ಶ್ಲೋಕವು ಮುಂಡನ ವಿಧಿಗೆ ಆಧಾರವಾಗಿದೆ ತೀರ್ಥಕ್ಷೇತ್ರ ಸೇರಿದವನು ಮುಂಡನ ಮಾಡಿಸಿಕೊಳ್ಳಬೇಕು ಮತ್ತು ಉಪವಾಸವನ್ನೂ ಆಚರಿಸಬೇಕು ಮಾನವನು ಗೈದ ಪಾಪಗಳು ತಲೆಯ ಮೇಲಿರುವುದರಿಂದ ಅವುಗಳ ಪರಿಮಾರ್ಜನೆಗಾಗಿ ಮುಂಡನ ಮಾಡಿಸಿಕೊಳ್ಳುವುದು ವಿಹಿತ

ಮನುಷ್ಯಾಣಾಂ ತು ಪಾಪಾನಿ
ತೀರ್ಥಾನಿ ಪ್ರತಿಗಚ್ಛತಾಮ್
ಕೇಶಾನಾಶ್ರಿತ್ಯ ತಿಷ್ಠಂತಿ
ತಸ್ಮಾತ್ ತದ್ವಪನಂ ಚರೇತ್

ಪದ್ಮಪುರಾಣದ ಈ ಶ್ಲೋಕವು ಮಾನವನು ಗೈದ ಪಾಪಗಳು ತಲೆಗೂದಲ ಬುಡದಲ್ಲಿ ಸಂಚಯವಾಗುವುದರಿಂದ ಆ ತಲೆಗೂದಲನ್ನು ಪೂರ್ಣವಾಗಿ ತೆಗೆದುಹಾಕದೇಕು ಎಂದೇ ತಿಳಿಸುತ್ತದೆ

ಸ್ತ್ರೀಯರಿಗೆ ತೀರ್ಥಕ್ಷೇತ್ರದಲ್ಲಿ ಮುಂಡನವು ಕಡ್ಡಾಯವೇ ಎಂಬ ಪ್ರಶ್ನೆಗೆ ಸ್ಮೃತಿಕಾರರಲ್ಲಿ ಭಿನ್ನಾಭಿಮತವಿದೆಯಾದರೂ ಪಾಪಾಚರಣೆಯಲ್ಲಿ ಸ್ತ್ರೀ ಪುರುಷರು ಸಮಾನರಾದ್ದರಿಂದ ಅವರಿಗೂ ಪೂರ್ಣ ಮುಂಡನ ಅವಶ್ಯವೆಂದು ಪ್ರಾಚೀನ ಸ್ಮೃತಿಕಾರರ ಮತ ವಿಹಿತವೂ ಸಹ ತಿರುಮಲ ಕ್ಷೇತ್ರದಲ್ಲಿ ಈ ವಿಧಿಯು ಆ ಕ್ಷೇತ್ರಕ್ಕೆ ಸೀಮಿತವಾದ ಆಚರಣೆಯೇ ಆಗಿದೆ ಈ ಕ್ಷೇತ್ರದಲ್ಲಿ ಸ್ತ್ರೀಪುರುಷರೆಂಬ ಭೇದವಿಲ್ಲದೆ, ಬಡವ, ಬಲ್ಲಿದ, ಅಧಿಕಾರಿ, ಅಧಿಕಾರರಹಿತ - ಇತ್ಯಾದಿ ಯಾವ ಭೇದವೂ ಇಲ್ಲದೆ ಎಲ್ಲರೂ ಮುಂಡನ ಮಾಡಿಸಿಕೊಳ್ಳುತ್ತಾರೆ ಸಾಧಾರಣವಾಗಿ ಕೂದಲ ತುದಿ ಕತ್ತರಿಸಲೂ ಹಿಂಜರಿಯುವ ಸ್ತ್ರೀಯರು ಈ ಕ್ಷೇತ್ರದಲ್ಲಿ ಮಾತ್ರ ನಿಸ್ಸಂಕೋಚವಾಗಿ ಭಕ್ತಿಯಿಂದ ತಮ್ಮ ಸಂಪೂರ್ಣ ತಲೆಗೂದಲನ್ನು ಕೊಟ್ಟುಬಿಡುತ್ತಾರೆ ಇವರಲ್ಲಿ ಕಾಮ್ಯಸಿದ್ಧಿಗಾಗಿ ಹಲವರು ಮುಂಡನ ಮಾಡಿಸಿಕೊಂಡರೆ, ಮತ್ತೆ ಕೆಲವರು ಭಗವತ್ಸನ್ನಿಧಿಯಲ್ಲಿ ತಮ್ಮ ಅಹಂಕಾರದ ಸಮರ್ಪಣೆ ಗೈಯ್ಯಲು ಈ ವಿಧಿಗೆ ಒಳಗಾಗುತ್ತಾರೆ ತಲೆಗೂದಲು ಸ್ತ್ರೀಯರಿಗೆ ಕಿರೀಟವಿದ್ದಂತೆ ಇದರ ಸಮರ್ಪಣೆ ತಮ್ಮ ಸೌಂದರ್ಯದ ಸಮರ್ಪಣೆಯೂ ಆಗಿದೆ ಇದೇ ವಿಧಿಯು ವೇಣೀದಾನ ವಿಧಿ ಎಂದು ಪ್ರಯಾಗಕ್ಷೇತ್ರದಲ್ಲಿ ಆಚರಿಸಲ್ಪಡುತ್ತದೆ ಜನಪ್ರಿಯವಾದ ಈ ವಿಧಿಯ ವಿಚಾರದಲ್ಲಿ ಹಲವರು ಆಧುನಿಕರು ಅಪಹಾಸ್ಯದ ಮಾತುಗಳನ್ನಾಡುವುದು ಕಂಡುಬರುತ್ತದೆ ಆದರೆ ಮುಂಡನದ ಹಿಂದಿರುವ ಉದಾತ್ತ ಉದ್ದೇಶದ ಅರಿವಿಲ್ಲದೆ ಅವರು ಮಾತನಾಡುವುದರಿಂದ ಅಂತಹ ಮಾತುಗಳಿಗೆ ಯಾವ ದೆಲೆಯೂ ಇಲ್ಲ

ತೀರ್ಥಸ್ನಾನ ತಾವು ಯಾತ್ರೆಮಾಡಲಿರುವ ತೀರ್ಥಕ್ಷೇತ್ರದಲ್ಲಿ ಯಾವುದೇ ಪುಣ್ಯನದಿ, ಪುಷ್ಕರಿಣಿ; ಸರೋವರ, ತಟಾಕ ಇದ್ದಲ್ಲಿ ಪತ್ನೀಸಹಿತನಾಗಿ ಸಂಕಲ್ಪ ಪುರಸ್ಸರವಾಗಿ ಸ್ನಾನಮಾಡದೇಕು. ತೀರ್ಥಸ್ನಾನವು ಪಾಪಪರಿಮಾರ್ಜನೆಗಾಗಿಯಾದ್ದರಿಂದ, ಜಲಕೇಳಿಯು ತೀರ್ಥಗಳಲ್ಲಿ ಕೂಡದು ಸ್ನಾನಸಮಯದಲ್ಲಿ ಆ ಕ್ಷೇತ್ರದ ಮಹಿಮೆಯನ್ನು ವರ್ಣಿಸುವ ಪೌರಾಣಿಕ ಶ್ಲೋಕಗಳನ್ನಾಗಲಿ, ವೇದೋಕ್ತವಾದ ಅಘಮರ್ಷಣ ಸೂಕ್ತವನ್ನಾಗಲಿ ಪಠಿಸದೇಕು ಯಾವುದೇ ಕಾರಣದಿಂದ ತೀರ್ಥಜಲವನ್ನು ಅಶುಚಿಗೊಳಿಸಬಾರದು

ಗಂಗೇ ಚ ಯಮುನೇಚೈವ
ಗೋದಾವರಿ ಸರಸ್ವತಿ
ನರ್ಮದೇ ಸಿಂಧುಕಾವೇರಿ
ಜಲೇಸ್ಮಿನ್ ಸನ್ನಿಧಿಂಕುರು

ಎಂಬ ಶ್ಲೋಕದ ಪುರಶ್ಚರಣೆ ಮಾಡುತ್ತಾ ಸ್ನಾನ ವಿಧಿಯನ್ನೆಸಗದೇಕು

ತರ್ಪಣ ತೀರ್ಥಸ್ನಾನದ ನಂತರ ಮಾಡದೇಕಾದ ಮತ್ತೊಂದು ಅತ್ಯವಶ್ಯವಾದ ವೇದವಿಹಿತ ಕಾರ್ಯವೆಂದರೆ ಪಿತೃತರ್ಪಣ ತೀರ್ಥಕ್ಷೇತ್ರಗಳಲ್ಲಿ ಗೈದ ತರ್ಪಣವಿಧಿಯು ಪಿತೃಗಳನ್ನು ರೌರವ ನರಕಗಳಿಂದ ಪಾರುಮಾಡುತ್ತದೆ ಅದರಿಂದಲೇ ಭಗೀರಥನು ದೇವಗಂಗೆಯನ್ನು ಭೂಮಿಗೆ ತಂದು, ಅಲ್ಲಿಂದ ಪಾತಾಳ ಲೋಕಕ್ಕೊಯ್ದು, ಕಪಿಲಕ್ರೋಧಾಗ್ನಿ ದಗ್ಧರಾದ ತನ್ನ ಅರವತ್ತು ಸಾವಿರ ಪಿತೃಗಳನ್ನು ಮುಕ್ತರನ್ನಾಗಿಸಿದ ಆದ್ದರಿಂದ ಈ ವಿಧಿಯು ಗೃಹಸ್ಥರಿಗೆ ಕಡ್ಡಾಯವಾದ ವಿಧಿಯಾಗಿದೆ

ದಾನ ಪ್ರಾಕ್ತನ ಕರ್ಮವಶರಾಗಿ ದರಿದ್ರರಾದ ಅನೇಕರು ತೀರ್ಥಕ್ಷೇತ್ರಗಳಲ್ಲಿರುತ್ತಾರೆ ಅಂತಹ ದರಿದ್ರರಿಗೆ ಮತ್ತು ಅಂಗವಿಕಲರಿಗೆ ಅಶನ, ವಸನಗಳನ್ನಿತ್ತು ತೃಪ್ತಿಪಡಿಸದೇಕು

ಇತರ ಆಚರಣೆಗಳು ಭಗವತ್ಸಾನ್ನಿಧ್ಯದಲ್ಲಿರುವಾಗ ಪ್ರಾಪಂಚಿಕ ಜಂಜಡಗಳನ್ನು ಮರೆಯದೇಕು ಅತಿಹೆಚ್ಚಿನ ಆಭರಣಾದಿಗಳನ್ನು ಧರಿಸಿದರೆ ಚಿತ್ತೈಕಾಗ್ರತೆ ಸಾಧ್ಯವಿಲ್ಲ ಆದ್ದರಿಂದ ಹೆಚ್ಚಿನ ಆಭರಣ ಧರಿಸದೇ ಯಾತ್ರೆ ಗೈಯ್ಯುವುದು ಸೂಕ್ತ ಯಾತ್ರೆಯು ವೈಭವ ಪ್ರದರ್ಶನದ ತಾಣವಲ್ಲ ಆದ್ದರಿಂದ ದೆಲೆ ಬಾಳುವ ವಸ್ತ್ರ ಧರಿಸಿ ಮತ್ತೊಬ್ಬರ ಗಮನ ಸೆಳೆಯಲೆತ್ನಿಸಬಾರದು ದೈವದ ಎದುರಿನಲ್ಲಿ ಎಲ್ಲರೂ ಸಮಾನರು ಆದ್ದರಿಂದ ಸಾಧಾರಣ ವಸ್ತ್ರ ಧರಿಸದೇಕು ಸುಗಂಧಲೇಪನ ಮಾಡಿಕೊಳ್ಳುವುದಾಗಲಿ ಪುಷ್ಪಮಾಲ್ಯಾದಿಗಳನ್ನು ಧರಿಸುವುದಾಗಲಿ ಕೂಡದು ಇವೆಲ್ಲವೂ ಭೋಗಜೀವನದ ಕುರುಹುಗಳಾದ್ದರಿಂದ ಭಗವಂತನ ಎದುರಿನಲ್ಲಿ ನಿಷೇಧಿತವಾಗಿವೆ

ತೀರ್ಥಯಾತ್ರೆಯು ಸಂಕೀರ್ಣ ವಿಧಿಯಾಗಿದ್ದು ಆಚರಿಸದೇಕಾದ ವಿಧಿ ನಿಷೇಧಗಳು ಅನೇಕವಿವೆ ಎಲ್ಲವುಗಳ ಆಚರಣೆ ಅಸಾಧ್ಯ ಆದರೂ ನಮ್ಮ ಅಧೀನದಲ್ಲಿರುವ ಹಲವು ಆಚರಣೆಗಳನ್ನಾದರೂ ಪರಿಪಾಲಿಸಿದಲ್ಲಿ ಅಲ್ಪಪುಣ್ಯವಾದರೂ ಲಭ್ಯವಾಗುತ್ತದೆ



# ಸಂತ ತ್ಯಾಗರಾಜರು

ಎಂ. ಎ. ಸಿಂಗಮ್ಮ

ದಕ್ಷಿಣದೇಶದ ವಿಜಯನಗರ ಸಾಮ್ರಾಜ್ಯವು ಅನೇಕ ಸ್ವತಂತ್ರರಾಜ್ಯಗಳಾಗಿ ಒಡೆದು ಹೋಯಿತು. ಅನಂತರ ಬ್ರಿಟಿಷರ ಆಳ್ವಿಕೆಯಲ್ಲಿ ಇಂಡಿಯಾ ದೇಶದ ಕಲೆಗಳೆಲ್ಲಾ ನಾಶವಾದವು. ಆದರೆ ಅದೃಷ್ಟವಶದಿಂದ ಇಂಡಿಯಾದೇಶದ ಧಾರ್ಮಿಕಶ್ರದ್ಧೆಯೂ, ಸಂಗೀತವೂ ನಾಶವಾಗದೆ ಉಳಿದುಕೊಂಡವು. ಬಹಳ ಹಿಂದಿನಕಾಲದಿಂದಲೂ ಇಂಡಿಯಾದೇಶವು ಸಾಧುಸಂತರ ಜನ್ಮಸ್ಥಾನವಾಗಿದ್ದುದರಿಂದ ದೈವಿಕ ಜನರು ಜನಸಮುದಾಯವನ್ನು ತಮ್ಮ ಪ್ರೀತಿ, ಭಕ್ತಿ, ದೈವಿಕ ಜ್ಞಾನ, ನಡತೆ ಇವುಗಳಿಂದ ಅವರಲ್ಲಿ ಜ್ಞಾನೋದಯವನ್ನುಂಟುಮಾಡಲು ಅವತರಿಸಿದರು. ಅವರುಗಳು ಸಂಗೀತಗಾರರು ಗಳಾಗಿದ್ದು ಜನ ಸಾಮಾನ್ಯರಿಗೆ ಸುಲಭವಾಗಿ ತಿಳಿಯುವಂತೆ ಭಕ್ತಿ ಸಂಗೀತಗಳನ್ನು ಸುಲಭವಾದ ಭಾಷೆಯಲ್ಲಿ ತಿಳಿಸಿದರು. ಕಾಲಕ್ರಮದಲ್ಲಿ ಸಂಸ್ಕೃತ, ಕನ್ನಡ, ತಮಿಳು ಮುಂತಾದ ಭಾಷೆಗಳಲ್ಲಿಯೂ ಭಕ್ತಿಯಿಂದ ಕೂಡಿದ ಕೀರ್ತನೆಗಳುಂಟಾದುವು. ಕರ್ನಾಟಕದ ಸಂಗೀತ ಪರಂಪರೆಯಲ್ಲಿ ಕನ್ನಡದ ಭಕ್ತಿ ಸಂಗೀತಗಳೂ, ತೆಲುಗಿನ ಕೀರ್ತನೆಗಳೂ ಪ್ರಭಾವವನ್ನು ಬೀರಿದುವು. ಇವರಲ್ಲಿ ಮುಖ್ಯರಾದ ಪುರಂದರದಾಸರ ತತ್ವನೀತಿಬೋಧಕವಾದ ಕನ್ನಡ ಕೃತಿಗಳು ಜನಪ್ರಿಯವಾಯಿತು. ಹಾಗೆಯೇ ಇವರಂತೆಯೆ ಪ್ರಸಿದ್ಧರಾದ ತ್ಯಾಗರಾಜರ ಭಕ್ತಿ ಸಂಗೀತಗಳಾದ ತೆಲುಗಿನ ಕೃತಿಗಳೂ ಜನಪ್ರಿಯವಾದವು. ಸಂತರಾದ ತ್ಯಾಗರಾಜರು-ಪುರಂದರದಾಸರು, ಭದ್ರಾಚಲರಾಮದಾಸರು, ಕ್ಷೇತ್ರಜ್ಞರು, ದೀಕ್ಷಿತರು, ಶಾಮಾಶಾಸ್ತ್ರಿ, ಜಯದೇವ ಕವಿ-ಮುಂತಾದವರ ಕೃತಿಗಳಿಂದ ಸ್ಫೂರ್ತಿಯನ್ನು ಪಡೆದು ಅದ್ಭುತವಾದ ಶೈಲಿಯಲ್ಲಿ ಕೀರ್ತನೆಗಳನ್ನು ರಚಿಸಿದರು. ಅವರು ಭಗವಂತನನ್ನು ತಮ್ಮದೇ ಆದ ರೀತಿಯಲ್ಲಿ ಆರಾಧಿಸಿ ಅವನ ಸಾಕ್ಷಾತ್ಕಾರವನ್ನು ಪಡದ ಅದ್ವಿತೀಯರಾಗಿದ್ದರು. ಭಗವಂತನನ್ನು ಸಂಗೀತದಿಂದಲೇ ಒಲಿಸಿದ ಬಂಗಾಳಾದೇಶದ ಚೈತನ್ಯ ಪ್ರಭುಗಳ ತತ್ವವೂ ಇವರ ತತ್ವವೂ ಒಂದೇ ಆಗಿದ್ದಿತು. ಹೀಗೆ ಹಿಂದಿನ ದಾರ್ಶನಿಕರು ಪವಿತ್ರವಾದ ಓಂಕಾರದಿಂದ ದೈವಿಕ ಜ್ಞಾನವನ್ನು ಹೇಗೆ ಪಡೆದರೋ ಹಾಗೆಯೇ ತ್ಯಾಗರಾಜರೂ ತಮ್ಮ ನಾದಬ್ರಹ್ಮವಾದ ಸಂಗೀತದಿಂದ ಭಗವಂತನಲ್ಲಿ ಐಕ್ಯತೆಯನ್ನು ಪಡೆದರು.

ತ್ಯಾಗರಾಜರು ತಮಿಳುನಾಡಿನ ಕಾವೇರಿ ನದಿಯ ಹತ್ತಿರದ ಬಯಲು ಪ್ರದೇಶದಲ್ಲಿ ನೆಲಸಿದ್ದ ಒಂದು ತೆಲುಗುಬ್ರಾಹ್ಮಣರ ಮನೆತನಕ್ಕೆ ಸೇರಿದವರು. ಇವರ ತಂದೆತಾಯಿಯವರು ತ್ಯಾಗರಾಜೇಶ್ವರನ ಭಕ್ತರಾಗಿಯೂ, ಬಹಳ ಸಾತ್ವಿಕ ಗುಣದಿಂದ ಕೂಡಿದವರಾಗಿಯೂ ಇದ್ದರು. ಇವರ ತಂದೆ ರಾಮಬ್ರಹ್ಮರವರು ಮತ್ತು ತಾಯಿ ಸೀತಮ್ಮನವರು ಇವರುಗಳಿಗೆ ತ್ಯಾಗರಾಜೇಶ್ವರನು ದರ್ಶನವಿತ್ತು ಸಂಗೀತ ಕಲಾವಿದನಾದ ಒಬ್ಬ ಸುಪುತ್ರನು ಜನಿಸುವನೆಂದು ಹೇಳಿದಂತೆ ಪ್ರತೀತಿ ಇದೆ. ಇವರ ಮನೆತನದವರೆಲ್ಲರೂ ಪರಂಪರೆಯಾಗಿ ಸಂಗೀತ ಸಾಹಿತ್ಯ ಭಗವದ್ಭಕ್ತಿ - ಇವುಗಳಿಂದ ಕೂಡಿದವರಾಗಿದ್ದರು. ಇವರ ತಂದೆ ಸಂಗೀತದಲ್ಲಿ ಅಪ್ರತಿಮವಾದ ಪಾಂಡಿತ್ಯವನ್ನು ಪಡೆದಿದ್ದುದರಿಂದ ರಾಮಾಯಣ, ಮಹಾಭಾರತ, ಭಾಗವತ ಮುಂತಾದ ಭಕ್ತಿಪರವಾದ ವಿಷಯಗಳ ಮೇಲೆ ಸಂಗೀತನಾಟಕಶಾಲೆಗಳನ್ನು ನಡೆಸುತ್ತಿದ್ದರಂತೆ. ಇವರ ತಾಯಿ ಸೀತಮ್ಮ ಪುರಂದರದಾಸರ ಕೀರ್ತನೆಗಳನ್ನು ಅರಿತು ಚೆನ್ನಾಗಿ ಹಾಡುತ್ತಿದ್ದರು.

ತ್ಯಾಗರಾಜರು ತಂಜಾವೂರು ಜಿಲ್ಲಯ ತಿರುವಾರೂರಿನಲ್ಲಿ ಸರ್ವಜಿತುನಾಮಸಂವತ್ಸರ ಮೇಷ ಮಾಸದ 25 ನೆಯದಿನ ವೈಶಾಖ ಶುದ್ಧ ಷಷ್ಠಿ ಸೋಮವಾರ ಪುನರ್ವಸು ನಕ್ಷತ್ರದಲ್ಲಿ 1767 ನೇ ಇಸವಿ ಮೇ ತಿಂಗಳು 4 ನೇ ದಿನಾಂಕ ಜನ್ಮತಾಳಿದರು. ಇವರ ಮನೆಯವರೆಲ್ಲರೂ ಸಂಗೀತಪ್ರಿಯರಾಗಿದ್ದುದರಿಂದ ಶಿಶುವಾಗಿದ್ದಾಗಿನಿಂದಲೇ ತ್ಯಾಗರಾಜರು ಸಂಗೀತದ-ಪ್ರೀತಿ, ಸ್ನೇಹ ಇವುಗಳಿಂದ ಕೂಡಿದ ವಾತಾವರಣದಲ್ಲಿಯೇ ಬೆಳೆದರು. ಆದ್ದರಿಂದ ಈ ಗುಣಗಳು ಹುಟ್ಟಿನಿಂದಲೇ ಅವರಲ್ಲಿ ಬೇರೂರಿ ಅವರು ಅವುಗಳನ್ನು ತಮ್ಮ ಜೀವನದಲ್ಲಿ ಅಳವಡಿಸಿಕೊಂಡರು. ಮಗುವಾಗಿದ್ದಾಗಲೇ ಈ ರೀತಿ ಜನ್ಮಜಾತವಾಗಿ ಬಂದಿದ್ದ ಅವರ ಈ ಪ್ರತಿಭೆಯನ್ನೂ, ಶ್ರೀರಾಮನಲ್ಲಿ ಅವರಿಗೆ ಇದ್ದ ಗಾಢವಾದ ಭಕ್ತಿಯನ್ನೂ ನೋಡಿ ಅವರ ತಂದೆಯವರಿಗೆ ಬಹಳ ಮೆಚ್ಚುಗೆಯಾಗಿ ಅವರು ತಮ್ಮ ವರದಾನವಾದ ಪುತ್ರನಿಗೆ ಎಲ್ಲಾ ರೀತಿಯ ಸೌಕರ್ಯಗಳನ್ನೂ, ಪರಿಸರವನ್ನು ಕಲ್ಪಿಸಲು ರಾಜಧಾನಿಗೆ ಸಮೀಪದಲ್ಲಿದ್ದ ತಿರುವಯ್ಯಾರಿಗೆ ಬಂದು ನೆಲೆಸಿದರು. ತಿರುವಯ್ಯಾರಿನಲ್ಲಿಯೇ ತ್ಯಾಗರಾಜರು ತಮ್ಮ ಸಂಗೀತದ ಕಟ್ಟಡದ ತಳಹದಿಯನ್ನು ಹಾಕಿದರು. ಮುಂದೆ ಅದೇ ಅವರ ನೆನಪಿನ ಶಾಶ್ವತವಾದ ಸ್ಮಾರಕವಾಯಿತು.

ಈ ಪ್ರತಿಭಾಶಾಲಿಯಾದ ಬಾಲಕನು ತನ್ನ ಹತ್ತನೆಯ ವಯಸ್ಸಿನಲ್ಲಿಯೇ ಬಹಳ ಜ್ಞಾನದಿಂದಲೂ, ಭಕ್ತಿಯಿಂದಲೂ ಕೂಡಿದ ಸಂಗೀತದ ಕೃತಿಗಳನ್ನು ತಾವು ವಾಸಿಸುತ್ತಿದ್ದ ಚಿಕ್ಕ ಮನೆಯ ಗೋಡೆಗಳ ಮೇಲೆ ಬರೆಯುತ್ತಿದ್ದುದನ್ನು, ಅಂದಿನ ಖ್ಯಾತ ಸಂಗೀತಗಾರರೆಲ್ಲಾ ಈ ಅದ್ಭುತವಾದ ಶಕ್ತಿಯುಳ್ಳ ಮಗುವನ್ನು ನೋಡಿ ಆಶ್ಚರ್ಯಪಟ್ಟು ಹೊಗಳಿದರು. ಅಂದಿನ ಕಾಲದ ಮಹಾರಾಜರೂ ಕೂಡ ಬಹಳ ವಿದ್ವಾಂಸರೂ, ಪ್ರತಿಭಾವಂತರೂ, ಗೀತರಚನಕಾರರೂ ಆಗಿದ್ದರು. ಚಿಕ್ಕ ಬಾಲಕನಾದ ತ್ಯಾಗರಾಜನು ತನ್ನ ತಂದೆಯವರ ಪೂಜೆಗೆ ಹೂವನ್ನು ತರಲು ಹೋಗುವಾಗ ನಿತ್ಯವೂ ಪ್ರಸಿದ್ಧ ವೈಣಿಕ ಗುರುಗಳಾದ ಸೊಂಟಿ ವೆಂಕಟರಮಣಯ್ಯರ್‌ರವರ ಮನೆಯ ಮುಂದೆಯೇ ಹೋಗಬೇಕಾಗಿದ್ದಿತು.



# ಸಪ್ತಗಿರಿ

## ಬರಹಗಾರರಿಗೆ ಸೂಚನೆ

ಸಪ್ತಗಿರಿ ಕನ್ನಡ ಮಾಸಪತ್ರಿಕೆ ಆಧ್ಯಾತ್ಮಿಕ, ಸಾಂಸ್ಕೃತಿಕ ಪ್ರಸಾರದ ಉದ್ದೇಶ ಹೊಂದಿ ಹೊರಬರುತ್ತಿರುವ ಪತ್ರಿಕೆ ಈ ಪತ್ರಿಕೆಯಲ್ಲಿ ಪ್ರಕಟನೆಗಾಗಿ ಲೇಖನಗಳನ್ನು, ಕವನ, ಕೀರ್ತನೆ, ಭಾವ, ಛಾಯಾಚಿತ್ರಗಳನ್ನು ಕಳುಹಿಸಬಯಸುವವರು ಕೆಳಗಣ ಸೂಚನೆಗಳನ್ನು ಗಮನಿಸಬೇಕು

೧) ಲೇಖನಗಳು ಆರು ಫುಲ್‌ಸ್ಕೇಪ್ ಹಾಳೆಗಳ ಮಿತಿಯಲ್ಲಿ ಹಾಳೆಯ ಒಂದೇ ಕಡೆ ಬರೆಯಲಾಗಿರಬೇಕು ಟೈಪ್‌ಮಾಡಿದ ಲೇಖನಗಳು ಅಪೇಕ್ಷಣೀಯ

೨) ದೇವಸ್ಥಾನ ಮೊದಲಾದ ಪ್ರಾಚ್ಯ ಅರ್ವಾಚೀನ ಸಾಂಸ್ಕೃತಿಕ ವಸ್ತು ವಿಷಯಗಳ ಬರಹಗಳು ತತ್ಸಂಬಂಧಿ ಫೋಟೋಗಳನ್ನೂ ಒಳಗೊಂಡಿದ್ದರೆ ಅನುಕೂಲಕರ

೩) ಚಿತ್ರಗಳನ್ನು ಇಂಡಿಯನ್ ಇಂಕಿನಲ್ಲೇ ಬರೆಯಬೇಕು

೪) ಕೇವಲ ಫೋಟೋಗಳನ್ನು ಮಾತ್ರ ಕಳುಹಿಸುವವರು, ಸ್ಪಷ್ಟವಾದವುಗಳನ್ನು ಪೂರ್ತಿವಿವರಗಳೊಂದಿಗೆ ಕಳುಹಿಸಬೇಕು

೫) ಸಪ್ತಗಿರಿಯ ತೆಲುಗು, ತಮಿಳು, ಹಿಂದಿ, ಆಂಗ್ಲಭಾಷಾ ಪತ್ರಿಕೆಗಳಿಂದ ಅನುವಾದ ಲೇಖನಗಳು ಅಗತ್ಯವಿಲ್ಲ

೬) ಗೃಹಲಕ್ಷ್ಮಿ ಕಿಶೋರಜಗತ್ ಮೊದಲಾದ ಶೀರ್ಷಿಕೆಗಳಿಗೆ ತಕ್ಕಂತಹ ಕಥೆ, ಪ್ರಬಂಧಗಳನ್ನೂ ಕಳುಹಿಸಬಹುದು

೭) ಪ್ರಕಟವಾದ ಲೇಖನಗಳಿಗೆ ಸೂಕ್ತ ಸಂಭಾವನೆ ಉಂಟು

ಮಿಕ್ಕ ವಿವರಗಳಿಗೆ

**ಸಂಪಾದಕರು,**

ಸಪ್ತಗಿರಿ,

ತಿ ತಿ ದೇವಸ್ಥಾನಗಳು, ತಿರುಪತಿ - 517 507,

ಚಿತ್ತೂರು ಜಿಲ್ಲೆ, ಆಂ ಪ

ಅವರು ಆ ಸಮಯದಲ್ಲಿ ಅವರ ವಿದ್ಯಾರ್ಥಿಗಳಿಗೆ ಸಂಗೀತಾಭ್ಯಾಸವನ್ನು ಮಾಡಿಸುತ್ತಿದ್ದರು ಇವನಿಗೆ ಸಂಗೀತದಲ್ಲಿ ಬಹಳ ಅಭಿರುಚಿಯಿದ್ದುದರಿಂದ ಅವರ ಹಾಡುಗಳಿಂದ ವಶೀಕರಿಸಲ್ಪಟ್ಟು ಅವರ ಮನೆಯಮುಂದೆ ಮಂತ್ರಮುಗ್ಧನಾಗಿ ನಿಂತುಬಿಡುತ್ತಿದ್ದನು ಇದನ್ನು ನೋಡಿದ ಗುರುಗಳು ಇವನನ್ನೂ ತಮ್ಮ ವಿದ್ಯಾರ್ಥಿ ವೃಂದದಲ್ಲಿ ಸೇರಿಸಿಕೊಂಡು ಇವನಿಗೂ ಸಂಗೀತಾಭ್ಯಾಸ ಮಾಡಿಸಿ ಇವನ ಪ್ರತಿಭೆಯನ್ನು ಕಂಡರು ಇವನು ಬಹಳ ದೇಗ ಒಂದು ವರ್ಷದಲ್ಲಿಯೇ ಅವರು ತನಗೆ ಕಲಿಸಬೇಕಾಗಿದ್ದ ಸಂಗೀತವನ್ನು ಕಲಿತುಕೊಂಡನು ಅವನು ಸಂಗೀತದಲ್ಲಿ ಬಹಳ ಪ್ರಾವಿಣ್ಯವನ್ನು ಹೊಂದಿದ್ದುದರಿಂದ ಯಾರಿಂದಲೂ ಅವನು ತಿರುಗಿ ಸಂಗೀತವನ್ನು ಕಲಿಯದೇಕಾಗಿರಲಿಲ್ಲ.

ಮುಂದೆ ದೊಡ್ಡವರಾದ ಮೇಲೆ ತ್ಯಾಗರಾಜರು ತಮ್ಮ ಸಂಗೀತದ ಕೃತಿಗಳನ್ನು ಬರೆಯಲು ಪ್ರಾರಂಭಿಸಿದರು 1784 ರಲ್ಲಿ ತ್ಯಾಗರಾಜರಿಗೆ ಪಾರ್ವತಿಯಮ್ಮ ಎಂಬ ಕನ್ಯೆಯೊಡನೆ ವಿವಾಹವಾಯಿತು ಆದರೆ ಅವರು ಬಹಳ ಕಾಲ ಬದುಕಿರದೆ ದೇಗ ದೇವರಪಾದಾರವಿಂದವನ್ನು ಸೇರಲು, ಅವರ ತಂಗಿ ಕಮಲಮ್ಮನನ್ನು ಮತ್ತೆ ವಿವಾಹವಾದರು ಅವರಿಗೆ ಸೀತಾಲಕ್ಷ್ಮಿ ಎಂಬ ಪುತ್ರಿಯೂ ಜನಿಸಿದಳು ಅವಳಿಗೆ ವಿವಾಹವಾಗಿ ಒಬ್ಬ ಪುತ್ರನು ಜನಿಸಿದನು ಅವನಿಗೆ ತ್ಯಾಗರಾಜನ್ ಎಂದು ಹೆಸರಿಟ್ಟರು ಮುಂದೆ ಅವನು ಸಂತಾನ ವಿಹೀನನಾದುದರಿಂದ ತ್ಯಾಗರಾಜರ ನೇರಸಂತತಿ ಮುಂದಕ್ಕೆ ಇಲ್ಲವಾಗಿರುತ್ತದೆ ತ್ಯಾಗರಾಜರಿಗೆ ಸಂಸ್ಕೃತ ಮತ್ತು ತೆಲುಗು ಭಾಷೆಗಳಲ್ಲಿ ಬಹಳ ಪ್ರಾವಿಣ್ಯವಿದ್ದಿತು ಅವರ ಸಂಗೀತದ ಕೃತಿಗಳನ್ನೆಲ್ಲಾ ತೆಲುಗಿನಲ್ಲಿ ಬರೆದರು ಅವರ ಜ್ಞಾನ ಪ್ರಕಾಶವಾದ ಆಧ್ಯಾತ್ಮಿಕ ಪರವಶತೆಯಿಂದ ಬಹಳ ಮಾಧುರ್ಯವಾದ ಸಂಗೀತದಿಂದ ಕೂಡಿದ ಭಕ್ತಿರಸವಾದ ಅಣಿಮುತ್ತುಗಳು ನಿರರ್ಗಳವಾಗಿ ಹರಿಯತೊಡಗಿದವು ಭಗವಂತನನ್ನು ಪಡೆಯಬೇಕೆಂಬ ಕಾತರ ಅವರ ಮನಸ್ಸಿನಲ್ಲಿ ಉಂಟಾಗಿ ನಾನಾರೀತಿಯ ಭಾವನೆಯಿಂದ ಕೂಡಿದ ಅನೇಕ ಸಂಗೀತ ಪ್ರಬಂಧಗಳು ಹೊರಬಂದವು. ಒಮ್ಮೆ ಒಬ್ಬ ಸನ್ಯಾಸಿಯು ಒಂದು ಬಹಳ ಅಮೂಲ್ಯವಾದ ಸಂಗೀತ ಶಾಸ್ತ್ರದ ಪುಸ್ತಕವನ್ನು ಅವರಿಗೆ ಬಹುಮಾನವಾಗಿ ಕೊಟ್ಟನೆಂಬ ಪ್ರತೀತಿ ಇದೆ ಅವರಿಗೆ ಆ ಸನ್ಯಾಸಿಯು ಬೇರೆ ಯಾರೂ ಆಗಿರದೆ ನಾರದ ಮಹರ್ಷಿಗಳೆಂದು ಕನಸಾಯಿತಂತೆ ಆ ದೈವಿಕವಾದ ಪುಸ್ತಕ ಭಂಡಾರದಿಂದ ಬೇರೆಯಾವ ಸಂಗೀತಗಾರರೂ ರಚಿಸಿಲ್ಲದಂತಹ ಅಪೂರ್ವ ರಾಗಗಳಿಂದಲೂ, ಸ್ವರ ಮಾಧುರ್ಯದಿಂದಲೂ ಅನೇಕ ಸಂಗೀತ ಕೃತಿಗಳನ್ನು ರಚಿಸಲು ಅವರಿಗೆ ಅನುಕೂಲವಾಯಿತು

ಎಲ್ಲ ಸಂತರೂ, ಸಿದ್ಧಪುರುಷರೂ ಬಡತನವಲ್ಲಿ ಇರುವುದನ್ನೇ ಇಚ್ಛಿಸಿ ತಮ್ಮ ಪವಿತ್ರವಾದ ಧರ್ಮಪ್ರಚಾರ ಕಾರ್ಯಗಳನ್ನು ಕಷ್ಟದಲ್ಲಿಯೇ ನಡೆಸುವಂತೆ ತ್ಯಾಗರಾಜರೂ ನಡೆಸಿದರು ಅವರೂ ಆ ಮಾರ್ಗಕ್ಕೆ ಹೊರತಾಗಿರಲಿಲ್ಲ ಅವರ ಬಡತನದ ಬಾಗಿಲಲ್ಲಿ ರಾಜರುಗಳ ಆಶ್ರಯವು ಕಾದಿದ್ದಿತು ಆದರೆ ಅವರು ತಮ್ಮ ಭಗವಂತನ ಸಾಕ್ಷಾತ್ಕಾರದ ದಾರಿಗೆ ರಾಜಾಶ್ರಯವನ್ನು ಮುಳ್ಳಿನಂತೆ ಭಾವಿಸಿ ಅವುಗಳನ್ನು ಅಲಕ್ಷ್ಯದಿಂದ ದೂರಮಾಡಿದರು ಬಡತನವನ್ನೇ ತಮ್ಮ ಮತವಾಗಿರಿಸಿಕೊಂಡು ಯಾವಾಗಲೂ ರಾಮನ ಮೇಲಿರುವ ತಮ್ಮ ಭಕ್ತಿಯೇ ತಮ್ಮ ಐಶ್ವರ್ಯವೆಂದು ಭಾವಿಸಿದರು ತಮ್ಮ ಜೀವನವನ್ನು ಪವಿತ್ರವಾದ ಭಾಗವತಧರ್ಮವಾದ ಉಂಛವೃತ್ತಿಯಿಂದ ನಡೆಸಲು ನಿಶ್ಚೈಸಿ ತಮ್ಮ ಶಿಷ್ಯರೊಂದಿಗೆ ಹೋಗುತ್ತಿದ್ದರು ಬರುತ್ತಿದ್ದ ಭಿಕ್ಷೆಯನ್ನು ಎಲ್ಲರೂ ಹಂಚಿಕೊಳ್ಳುತ್ತಿದ್ದರೇ ಹೊರತು ಯಾರ ಮುಂದೆಯೂ ಕೈಚಾಚುತ್ತಿರಲಿಲ್ಲ ತಾಯಿಯ ಗರ್ಭದಲ್ಲಿರುವ ಭ್ರೂಣವನ್ನು ಯಾರಿಗೂ ತಿಳಿಯದಂತೆ ಆಶ್ಚರ್ಯಕರವಾದ ರೀತಿಯಲ್ಲಿ ಬೆಳಸುವ ಭಗವಂತನ ದಯೆಯನ್ನೇ ಅವರು ನಂಬಿದ್ದರು ಅನೇಕ ಶಿಷ್ಯರುಗಳ ಜೊತೆಯಲ್ಲಿ ಅವರು ತಿರುವಯ್ಯಾರಿನ ಬೀದಿಗಳಲ್ಲಿ ಎಲ್ಲರ ಹೃದಯವನ್ನೂ ಪ್ರವೇಶಿಸಿ ಮನಸ್ಸನ್ನು ಪ್ರಚೋದಿಸುವಂತಹ ಭಕ್ತಿಯುತವಾದ ಕೀರ್ತನೆಗಳನ್ನು ಹಾಡುತ್ತಾ ಹೋಗುತ್ತಿದ್ದರು ಅವರ ಆ ಭಕ್ತಿಯುತವಾದ ಗಾನವನ್ನು ಕೇಳಿದ ಮನೆಯ ಗೃಹಿಣಿಯರು ನಿತ್ಯವೂ ಅಡಿಗೆಗೆ ಅವಶ್ಯಕವಾದ ಉಪ್ಪಿನಿಂದ ಹಿಡಿದು ಅಕ್ಕಿ ಬೇಳೆ ವರೆಗಿನ ಎಲ್ಲಾ ಸಾಮಾನುಗಳನ್ನೂ ಅವರ ಜೋಳಿಗೆಗೆ ಹಾಕುತ್ತಾ ಅವರನ್ನು ಹಿಂಬಾಲಿಸುತ್ತಿದ್ದರು ಭಗವಂತನ ದಯೆಯಿಂದ ಈ ಉಂಛವೃತ್ತಿಯಲ್ಲಿ ಅವರಿಗೂ ಅವರ ಶಿಷ್ಯರಿಗೂ ಅವಶ್ಯಕವಾದಷ್ಟು ಆಹಾರಕ್ಕಿಂತಲೂ ಹೆಚ್ಚಾಗಿ ದೊರಕುತ್ತಿದ್ದುದರಿಂದ ಅವರನ್ನು ಮೆಚ್ಚಿ ಅವರನ್ನು ನೋಡಲು ಬರುತ್ತಿದ್ದ ಇತರ ಭಕ್ತರಿಗೂ ಅವರು ಆಹಾರವನ್ನು ಒದಗಿಸಲು ಸ್ವಲ್ಪವೂ ಕಷ್ಟವಾಗಲಿಲ್ಲ

ಶ್ರೀರಾಮ ಸೀತಾಲಕ್ಷ್ಮಣರ ವಿಗ್ರಹಗಳನ್ನು ಪ್ರತಿಷ್ಠೆ ಮಾಡಿದ್ದ ಒಂದು ತಡಿಕೆಹೊದಿಸಿದ್ದ ಗುಡಿಸಲನ್ನು ಬಿಟ್ಟರೆ ತ್ಯಾಗರಾಜರಿಗೆ ಬೇರೆಯಾವ ಪ್ರಾಪಂಚಿಕ ಆಸ್ತಿಯೂ ಇರಲಿಲ್ಲ ಆ ದೇವರ ವಿಗ್ರಹಗಳಿಗೆ ತಮಗೆ ನಿತ್ಯವೂ ದೊರತ ಭಿಕ್ಷೆಯನ್ನು ಮೊದಲು ನೈವೇದ್ಯ ಮಾಡಿ ಅನಂತರ ತಮ್ಮ ಶಿಷ್ಯರೊಂದಿಗೆ ಸೇರಿ ತಮ್ಮೆಲ್ಲರ ಹಸಿವನ್ನು ಇಂಗಿಸಿಕೊಳ್ಳುತ್ತಿ

ದ್ದರು ಅಲ್ಲದೆ ಅವರು ಬಹಳ ದಯಾವಂತರಾಗಿದ್ದು ದೇವರು ತಮಗೆ ನೀಡಿದ್ದರಲ್ಲಿ ಇತರ ಬಡವರಿಗೂ ಹಸಿದವರಿಗೂ ಹಂಚುತ್ತಿದ್ದರು ಕಾಲಕ್ರಮೇಣ ಅವರು ಅಸಾಧಾರಣವಾದ ಸಂಗೀತ ರಚನಕಾರರೆಂಬ ಖ್ಯಾತಿಯು ಎಲ್ಲೆಡೆಗೂ ಹಬ್ಬಿ ಅವರು ಯಾವಾಗಲೂ ಘನ ವಿದ್ವಾಂಸರಿಂದಲೂ, ಕವನಕಾರರಿಂದಲೂ, ಸಂಗೀತಗಾರರಿಂದಲೂ ಸುತ್ತುವರಿಯಲ್ಪಟ್ಟಿದ್ದರು ಯಾವಾಗಲೂ ಹಬ್ಬದ ನೋಟವನ್ನು ಹೊಂದಿದ್ದ ಅವರ ಬಡ ಕುಟೀರವು ಎಲ್ಲರಿಗೂ ಮನರಂಜನೆಯ ಕೇಂದ್ರವಾಗಿದ್ದಿತು ಎಲ್ಲರೂ ತ್ಯಾಗರಾಜರ ಜೊತೆಯಲ್ಲಿ ತಿಂಗಳುಗಟ್ಟಳೆಗೆ ಇದ್ದು ಅವರ ಅಸಾಧಾರಣವಾದ ಸಂಗೀತವನ್ನು ಕೇಳುತ್ತಾ, ಅವರ ಬಡತನದ ಆಹಾರವನ್ನು ಹಂಚಿಕೊಳ್ಳುತ್ತಾ ಅವರೊಂದಿಗೆ ಇರುತ್ತಿದ್ದರು ಒಮ್ಮೆ ತಂಜಾವೂರಿನ ಮಹಾರಾಜನು ತ್ಯಾಗರಾಜರಿಗೆ ನಮಸ್ಕರಿಸಿ ತನ್ನ ಒಡ್ಡೋಲಗವನ್ನು ಅಲಂಕರಿಸುವಂತೆ ಪ್ರಾರ್ಥಿಸಿಕೊಂಡನು ಆದರೆ ಬಡತನ, ಸರಳತೆ, ಕಷ್ಟಸಹಿಷ್ಣುತೆ ಇವುಗಳಿಂದ ಕೂಡಿದ ದೈವಿಕ ಮನುಷ್ಯರಾದ ತ್ಯಾಗರಾಜರು ಈ ಪ್ರಲೋಭಗಳಿಗೆಲ್ಲಾ ಒಳಗಾಗದೆ ಅವನ ಆಮಂತ್ರಣವನ್ನು ತಿರಸ್ಕರಿಸಿದರು ಅವರು ಎಂದೋ ಜೀವನದಲ್ಲಿ ವಿಲಾಸ ಜೀವನವನ್ನೂ, ಸುಖಲೋಲುಪತೆಯನ್ನೂ, ಪಟಾಟೋಪವನ್ನೂ ಮನಃಪೂರ್ವಕವಾಗಿ ತ್ಯಜಿಸಿದರು ಅವರು ಐಶ್ವರ್ಯಕ್ಕಿಂತ ಬಡತನವೇ ದೇವರನ್ನು ಪಡೆಯಲು ಹತ್ತಿರದ ದಾರಿ ಎಂಬ ತತ್ವವನ್ನು ನಂಬಿದ್ದರು

ತ್ಯಾಗರಾಜರು ದೃಢವಾದ ಮನಃಸ್ಥೈರ್ಯವನ್ನೂ, ದೃಢಸಂಕಲ್ಪವನ್ನೂ, ಸ್ಥಿರಬುದ್ಧಿಯನ್ನೂ ದೈವದತ್ತವಾಗಿ ಪಡೆದಿದ್ದರು ಒಮ್ಮೆ ಒಬ್ಬ ಸಾಧುವು ಅವರಿಗೆ ತನ್ನ ಅನುಭವದಿಂದ ತಿಳಿದುಕೊಂಡಿದ್ದ ರಾಮನಾಮದ ಸಾಮರ್ಥ್ಯವನ್ನು ಅವರಿಗೆ ತಿಳಿಸಲು ಇಚ್ಛಿಸಿ ರಾಮನಾಮವನ್ನು ೯೬ ಕೋಟಿಸಲ ಜಪಿಸುವುದರಿಂದ ಭಗವಂತನ ಸಾಕ್ಷಾತ್ಕಾರವನ್ನು ಪಡೆಯಬಹುದೆಂಬುದನ್ನು ತಿಳಿಸಿದನು ಒಂದು ಪರಿಮಿತಿಯಲ್ಲಿ ಆಯಸ್ಸನ್ನು ಪಡೆದಿರುವ ಮನುಷ್ಯನಿಗೆ ಅದು ಸುಲಭಸಾಧ್ಯವಾದ ಕೆಲಸವಾಗಿರಲಿಲ್ಲ ಆದರೆ ಯಾವ ರೀತಿಯಿಂದಲೂ ಯಾವುದಕ್ಕೂ ಜಗ್ಗದ ತ್ಯಾಗರಾಜರ ಉತ್ಸಾಹವು ಕಮ್ಮಿಯಾಗಿರಲಿಲ್ಲವಾದ್ದರಿಂದ ಅವರು ಪ್ರತಿನಿತ್ಯವೂ ಒಂದು ಲಕ್ಷದ ಇಪ್ಪತ್ತೈದು ಸಾವಿರ ರಾಮನಾಮವನ್ನು ಜಪಿಸುತ್ತಾ ಬಹಳ ದೊಡ್ಡದೂ, ಪವಿತ್ರವೂ, ಕಷ್ಟಕರವೂ ಆದ ಈ ತಪಸ್ಸನ್ನು ಬಹಳ ಭಕ್ತಿಯಿಂದಲೂ, ಏಕಾಗ್ರಚಿತ್ತತೆಯಿಂದಲೂ ಮಾಡಿ ೨೧ ವರ್ಷದಲ್ಲಿ ಮುಗಿಸಿದರು ಇಲ್ಲಿಯವರೆಗೆ ಯಾವ ಮನುಷ್ಯನೂ ಈ ರೀತಿಯ ಸವಾಲನ್ನು ಎದುರಿಸಿರಲಿಲ್ಲ ಇದು ಬಹಳ ಕಷ್ಟಕರವಾದ ಆಧ್ಯಾತ್ಮದ ಸವಾಲಾಗಿದ್ದಿತು ಅವರು ಜಪಮಾಡುತ್ತಾ ಧ್ಯಾನಮಾಡುತ್ತಿದ್ದ ಕಾಲದಲ್ಲಿ ಶ್ರೀರಾಮನು ಅವರಿಗೆ ಅನೇಕಸಲ ದರ್ಶನವನ್ನು ಇತ್ತನೆಂಬುದು ಅವರ ಪರವಶತೆಯಿಂದಲೂ, ಆನಂದದಿಂದಲೂ ಭಕ್ತಿರಸದಿಂದಲೂ ಕೂಡಿದ ಅವರ ಅಮರವಾದ, ಚೈತನ್ಯಭರಿತವಾದ ಸಂಗೀತ ಕೃತಿಗಳಿಂದ ತಿಳಿದುಬರುತ್ತದೆ ತ್ಯಾಗರಾಜರು ಭಗವಂತನಿಗೆ ತಮ್ಮನ್ನು ಸೇವಕನಾಗಿ, ಚಿಕ್ಕ ಮಗುವಾಗಿ, ಸಹೋದರನಾಗಿ, ನಮ್ಮನಾದ ಭಕ್ತನಾಗಿ ಹೀಗೆ ಅನೇಕ ಭಾವಗಳಿಂದ ಸಮರ್ಪಿಸಿಕೊಂಡು ತಮ್ಮ ಪ್ರಾಪಂಚಿಕ ಜ್ಞಾನವನ್ನೆಲ್ಲ ಕಳೆದುಕೊಂಡಿದ್ದರು ಅವರ ಹೃದಯಾಂತರಾಳದಿಂದ ಹೊರ ಹೊಮ್ಮಿದ ಕೃತಿಗಳೇ ಸಂಗೀತ ಸಮುದ್ರದಲ್ಲಿನ ಅಮೂಲ್ಯವಾದ ಅಣಿಮುತ್ತುಗಳು ಅವುಗಳು ಭಕ್ತಿರಸವಾದ ಸಂಗೀತದಿಂದ ಭಗವಂತನನ್ನು ಹೇಗೆ ಸಾಕ್ಷಾತ್ಕರಿಸಬಹುದು ಎಂಬುದಕ್ಕೆ ಬೆಳಕನ್ನು ಬೀರುತ್ತವೆ ಅವುಗಳಲ್ಲಿ ಸ್ಥಿರವಾದ ಸತ್ಯಗಳೂ ಪ್ರಾಚೀನ ಧರ್ಮಗ್ರಂಥಗಳ ಶ್ರೇಷ್ಠವಾದ ತತ್ವಗಳೂ ಅಡಗಿ ಲಲಿತವಾದ ಮಧುರ ಸಂಗೀತಗಳಿಂದಲೂ ಸ್ಪಷ್ಟವಾದ ನುಡಿಗಳಿಂದಲೂ ತಿಳಿಸಲ್ಪಟ್ಟಿರುವುದರಿಂದ ಸಾಧಾರಣ ಜ್ಞಾನವನ್ನು ಹೊಂದಿರುವ ಮನುಷ್ಯರೂ ಅವುಗಳಿಂದ ತತ್ವಗಳನ್ನು ಅರಿತುಕೊಂಡು ಅವುಗಳನ್ನು ಪ್ರಶಂಸಿಸಿ, ಅನುಭವಿಸಿ ನಡೆಸಲು ಅನುಕೂಲವಾಗಿರುತ್ತದೆ

ಸಂಗೀತದ ಹೆಚ್ಚುಗಾರಿಕೆಯನ್ನು ತಿಳಿಸುತ್ತಾ ತ್ಯಾಗರಾಜರು ಭಕ್ತಿಯಿಂದ ಕೂಡಿದ ಸಂಗೀತವೇ ಮುಕ್ತಿಗೆ ದಾರಿ ಎಂಬುದನ್ನು ತಿಳಿಸುತ್ತಾರೆ, ಅಲ್ಲದೆ ಸಂಗೀತಾಮೃತವನ್ನು ಕುಡಿಯುವುದೇ ಸಂತೋಷವೆಂಬುದನ್ನೂ, ಸಪ್ತಸ್ವರಗಳ ನಾದಗಳ ಮಿಳಿತವೇ ಭಗವಂತನೆಂಬುದನ್ನೂ ತಿಳಿಸುತ್ತದೆ ಹೀಗೆ ಅವರು ತಮ್ಮನ್ನು ಸಂಗೀತದೊಂದಿಗೆ ಏಕೀಭವಿಸಿಕೊಂಡು ಅದನ್ನು ಅನುಭವಿಸುತ್ತಾ ಅದಕ್ಕೋಸ್ಕರವೇ ಜೀವಿಸುತ್ತಿದ್ದರು ಪ್ರಾಪಂಚಿಕ ಆಸೆಗಳನ್ನು ತೊರೆದು ಭಗವಂತನಿಗೆ ಪೂರ್ತಿ ಶರಣರಾಗಬೇಕೆಂಬುದೇ ಅವರ ತತ್ವವಾಗಿದ್ದಿತು

ತ್ಯಾಗರಾಜರ ಅನೇಕ ಕೃತಿಗಳು ಬಹಳ ತತ್ವಪೂರ್ಣವಾಗಿದ್ದು ಕ್ಷಣಭಂಗುರವಾದ ಈ ಪ್ರಾಪಂಚಿಕ ಸುಖವೂ ಕೀರ್ತಿಯೂ ಎಷ್ಟು ನಿರರ್ಥಕವಾದುದು ಎಂಬುದನ್ನು ತಿಳಿಸುತ್ತವೆ ಅಲ್ಲದೆ ಈ ಶರೀರ, ಪತ್ನಿ, ಪುತ್ರರು, ಐಶ್ವರ್ಯ, ಬಂಧುಗಳು, ಪ್ರಾಪಂಚಿಕ ಸುಖಗಳು - ಎಲ್ಲವೂ ಕ್ಷಣಿಕವಾದವುಗಳಾಗಿ ಮನುಷ್ಯನನ್ನು ಪಾಪಮಾಡಲು ಪ್ರೇರಿಸಿ, ಅವನನ್ನು ಮರಳುಮಾಡಿ ಅವನ ವಿವೇಕವನ್ನು ನಾಶಮಾಡಿ ಅವನನ್ನು ನರಕದ ಬಾಗಿಲಿಗೆ ಒಯ್ಯುತ್ತವೆ ಎಂಬ ವಿಷಯವನ್ನೂ ತಿಳಿಸುತ್ತದೆ ತ್ಯಾಗರಾಜರು ರಾಮನನ್ನು ಮೊರೆಹೊಕ್ಕು ಈ ಎಲ್ಲಾ ತೊಂದರೆಗಳಿಂದ ತಮ್ಮನ್ನು ಬಿಡಿಸಿ ದಯೆತೋರಿಸಿ ಕಾಪಾಡಬೇಕೆಂದು ಪ್ರಾರ್ಥಿಸುವುದನ್ನೂ ತಿಳಿಸುತ್ತವೆ ಕೆಟ್ಟ ಆಸೆಗಳನ್ನೆಲ್ಲಾ ಮನಸ್ಸಿನಿಂದ ತಳ್ಳಿ ಭಗವಂತನನ್ನು ಧ್ಯಾನಮಾಡಿ ಅವನ ಹೆಸರನ್ನು ಜಪಿಸುತ್ತಾ ಇರಬೇಕೆಂಬುದನ್ನು ತಿಳಿಸಿ ನಾವು ಶುದ್ಧರಾಗಲು ಗಂಗಾಸ್ನಾನಕ್ಕಿಂತ ಭಗವಂತನ ಮೇಲೆ ಅತಿಯಾದ ಪ್ರೀತಿ ಮತ್ತು ಭಕ್ತಿಯನ್ನು ಹೊಂದುವುದು ಮುಖ್ಯವೆಂಬುದನ್ನು ತಿಳಿಸುತ್ತವೆ ತ್ಯಾಗರಾಜರು ಕಣ್ಣಿನ ರಪ್ಪೆಯು ಕೂದಲು ಹೇಗೆ ಕಣ್ಣಿನ ಗೊಂಬೆಯನ್ನು ಕಾಪಾಡುತ್ತದೆಯೋ ಹಾಗೆ ದಯಾಮಯನಾದ ಭಗವಂತನು ತನ್ನ ಭಕ್ತರನ್ನು ಕಾಪಾಡುತ್ತಾನೆ ಎಂದು ನಂಬಿದ್ದರು

ತ್ಯಾಗರಾಜರು ನಿರ್ಗತಿಕರಾಗಿದ್ದರೂ ಯಾವುದರಲ್ಲಿಯು ಹೆಚ್ಚು ಆಸೆಯನ್ನು ಹೊಂದದೆ ತಾವು ಇದ್ದ ಸ್ಥಿತಿಯಲ್ಲಿಯೇ ಹೆಚ್ಚಾದ ಶಾಂತಿಯನ್ನೂ, ಸಂತೋಷವನ್ನೂ ಪಡೆದಿದ್ದರು ತಮ್ಮ ಅಸಾಧಾರಣವಾದ ಪಾಂಡಿತ್ಯದಿಂದ ಹೇರಳವಾಗಿ ಹಣವನ್ನು ಗಳಿಸಬಹುದಾಗಿದ್ದರೂ ಅವರು ಆ ಹಣವನ್ನು ಮಣ್ಣಿನ ಹೆಂಟೆಯಂತೆ ಅಲಕ್ಷಿಸಿದರು ಹಣದ ಸಂಪಾದನೆಯಲ್ಲಿ ಈ ರೀತಿ ಅಲಕ್ಷ್ಮ ಭಾವನೆಯಿಂದ ಇದ್ದುದರಿಂದ ಅವರು ತಮ್ಮ ಸ್ವಂತ ಅಣ್ಣನ ಕೋಪವನ್ನೂ ನಿಂದೆಯನ್ನೂ ಅನುಭವಿಸಬೇಕಾಯಿತು ಅವರು ಹಣವನ್ನು ಸಂಪಾದಿಸದೇ ಇದ್ದುದು, ಹಣದ ಮೇಲೆ ಅತಿಯಾದ ವ್ಯಾಮೋಹವನ್ನು ಹೊಂದಿದ್ದ ಅವರ ಅಣ್ಣನಿಗೆ ಬಹಳ ಅಸಮಾಧಾನವಾಗಿದ್ದಿತು ಅವರು ಮನೆಯಲ್ಲಿ ಇಲ್ಲದೆ ಇದ್ದಾಗ ಒಮ್ಮೆ ಅವರ ಅಣ್ಣನು ಅವರು ಬರೆದು ಇಟ್ಟಿದ್ದ ಸಂಗೀತದ ಪುಸ್ತಕಗಳನ್ನೆಲ್ಲಾ ದೆಂಕಿಗೆ ಹಾಕಿಬಿಟ್ಟರು.

ಮತ್ತೊಮ್ಮೆ ಇದು ಸಾಲದೆಂದು ಅವರ ಅಣ್ಣನು ಒಂದು ಅಮಾವಾಸ್ಯೆಯ ದಿವಸ ಅವರು ನಿತ್ಯವೂ ಭಕ್ತಿಯಿಂದ ಪೂಜಿಸುತ್ತಿದ್ದ ರಾಮವಿಗ್ರಹವನ್ನು ನದಿಯತೀರಕ್ಕೆ ತೆಗೆದುಕೊಂಡುಹೋಗಿ ಕಾವೇರಿಗೆ ಎಸೆದುಬಿಟ್ಟರು ಅವರ ಅಣ್ಣನು ಈ ರಾಮವಿಗ್ರಹದ ಪೂಜೆಯು ತ್ಯಾಗರಾಜರನ್ನು ಮರಳು ಮಾಡಿರುವುದೆಂದೂ, ಅದು ಅವರನ್ನು ಬಿಟ್ಟುಹೋದರೆ ಆಗ ಅವರು ತಮ್ಮ ಪ್ರತಿಭೆಯನ್ನು ತಾವಾಗಿಯೇ ಹಣವನ್ನು ಶೇಖರಿಸುವುದಕ್ಕೆ ಉಪಯೋಗಿಸುತ್ತಾರೆಂದು ನಂಬಿದ್ದನು ಆದರೆ ಅವರ ಈ ಕೆಟ್ಟ ಹಂಚಿಕೆಯು ಫಲಕಾರಿಯಾಗಲಿಲ್ಲ

ಆ ದಿವಸ ಬಡವರಾದ ತ್ಯಾಗರಾಜರು ಯಾವಾಗ ತಮ್ಮ ಮಧುಕರ ವೃತ್ತಿಯಿಂದ ಭಿಕ್ಷೆಯನ್ನು ತೆಗೆದುಕೊಂಡು ಮನೆಗೆ ಬಂದರೋ ಆಗ ಅವರ ನೈವೇದ್ಯವನ್ನು ಸ್ವೀಕರಿಸಲು ಅವರ ಆರಾಧ್ಯದೈವವಾದ ರಾಮನು ಅವರು ಪ್ರತಿಷ್ಠೆಮಾಡಿದ್ದ ಜಾಗದಲ್ಲಿ ಇಲ್ಲದೇ ಇದ್ದುದನ್ನು ನೋಡಿ ಅವರ ಹೃದಯವು ಒಡೆದು ಚೂರಾದಂತೆ ಆಯಿತು ಯಾವ ವಿಗ್ರಹವನ್ನು ಅವರು ಆರಾಧಿಸುತ್ತಾ ಉತ್ಸಾಹವಾಗಿದ್ದರೋ, ಯಾವ ಅಮೂಲ್ಯವಾದ ವಸ್ತುವಿಗೋಸ್ಕರ ಅವರು ಇಷ್ಟುದಿವಸವೂ ಜೀವಿಸಿದ್ದರೋ ಆ ವಸ್ತುವು ಅಂದು ಅವರಿಗೆ ಎಲ್ಲಿಯೂ ಕಾಣಲಿಲ್ಲ ಅದರಿಂದ ಜೀವಿಸಿರುವುದೇ ಅವರ ಮನಸ್ಸಿಗೆ ಬಹಳ ದುಃಖಕರವಾಗಿಯೂ, ಅಸಹನೀಯವಾಗಿಯೂ ತೋರಿತು ಈ ರೀತಿಯ ಮರ್ಮಭೇದಕವಾದ ಸಂಕಟದಿಂದಲೂ, ದುಃಖದಿಂದಲೂ ಮುಳುಗಿದ್ದ ಅವರ ಹೃದಯಾಂತರಾಳದಿಂದ ಅನೇಕ ವೇದನಾಪೂರಿತವಾದ ಕೃತಿಗಳು ಹೊರಬಂದವು. ಅವರು ತಮ್ಮ ಪ್ರೀತಿಯ ರಾಮನು ಅದೃಶ್ಯನಾದುದಕ್ಕಾಗಿ ಬಹಳವಾಗಿ ಪರಿತಪಿಸಿದರು ಅವರ ಈ ತೀವ್ರ ವೇದನೆಯಿಂದ ಹೊರಬಂದ ಶಬ್ದಪ್ರಯೋಗಗಳನ್ನು ಕೇಳಿದ ಅವರ ಶಿಷ್ಯರ ಕಣ್ಣುಗಳಲ್ಲಿಯೂ ನೀರು ಬಂದವು. ಭಗವಂತನ ವಿಗ್ರಹವಿಲ್ಲದೆ ಒಂದು ನಿಮಿಷವನ್ನೂ ಸಹಿಸಲು ಅಶಕ್ತರಾದ ತ್ಯಾಗರಾಜರು ಅನಾಥ ಮಗುವಿನಂತೆ ಅಳಲು ಪ್ರಾರಂಭಿಸಿದರು ಇದನ್ನು ಕಂಡ ದಯಾಮಯನಾದ ರಾಮನಿಗೆ ತನ್ನ ಭಕ್ತನ ಈ ವೇದನೆಯನ್ನು ಸಹಿಸಲಾಗಲಿಲ್ಲ ಅವನು ತ್ಯಾಗರಾಜರಿಗೆ ಅಂದಿನ ರಾತ್ರಿ ಕನಸಿನಲ್ಲಿ ದರ್ಶನವನ್ನಿತ್ತು ಕಾವೇರಿ ನದಿಯ ಒಂದು ಗೊತ್ತಾದ ಸ್ಥಳದಲ್ಲಿ ತನ್ನ ವಿಗ್ರಹವನ್ನು ಹುಡುಕುವಂತೆ ಹೇಳಿ ಅಂತರ್ಧಾನನಾದನು ತ್ಯಾಗರಾಜರು ಬೆಳಗಾಗುವವರೆಗೂ ಕಾಯದೆ ಕತ್ತಲೆಯಿಂದಲೂ, ಚಳಿಯಿಂದಲೂ ಕೂಡಿದ್ದ ಆ ರಾತ್ರಿಯೇ ಹುಚ್ಚರಂತೆ ಕಾವೇರಿಯ ನದಿಯ ತೀರಕ್ಕೆ ಓಡಿಹೋಗಿ ಮರಳಿನಲ್ಲಿ ರಾಮನು ತಿಳಿಸಿದ ಸ್ಥಳದಲ್ಲಿ ಹುಡುಕಿದರು ತಕ್ಷಣವೇ ತ್ಯಾಗರಾಜರಿಗೆ ಬೆಳದಿಂಗಳಿನಲ್ಲಿ ಹೊಳೆಯುತಿದ್ದ ರಾಮನ ವಿಗ್ರಹವು ಸಿಕ್ಕಿತು ಅವರ ಆನಂದಕ್ಕೆ ಪಾರವೇ ಇರಲಿಲ್ಲ. ಅವರು ತಮ್ಮ ಪ್ರೀತಿಪಾತ್ರವಾದ ಆ ಪವಿತ್ರ ವಿಗ್ರಹವನ್ನು ಎರಡು ಕೈಗಳಿಂದಲೂ ಬಾಚಿ ತಮ್ಮ ಕಣ್ಣಿಗೂ, ತಲೆಗೂ, ಹೃದಯಕ್ಕೂ ಒತ್ತಿಕೊಂಡು ತಮ್ಮ ಆರಾಧ್ಯದೈವವಾದ ರಾಮನು ಸಿಕ್ಕಿದನೆಂದು ಸಂತೋಷದಿಂದ ಹಾಡುತ್ತಾ ತಮ್ಮ ಬಡಗುಡಿಸಿಲಿಗೆ ತೆಗೆದುಕೊಂಡು ಹೋಗಿ ಅಲ್ಲಿನ ಮಂಟಪದಲ್ಲಿ ತಿರುಗಿ ಪ್ರತಿಷ್ಠಾಪನೆ ಮಾಡಿದರು. ಆಗ ಅವರ ಉದ್ರೇಕವಾದ ಹೃದಯದಿಂದ ತಾವಾಗಿಯೇ ಅನೇಕ ಕೃತಿಗಳು ಹೊರಬಂದವು. ಅವರಿಗೆ ಎಲ್ಲೆಲ್ಲಿಯೂ ರಾಮನದರ್ಶನವಾಗಿ ಅವರು ಪ್ರೀತಿಯಿಂದಲೂ ಭಕ್ತಿಯಿಂದಲೂ ರಾಮನ ಸಾನ್ನಿಧ್ಯವನ್ನು ಪಡೆದರು

ಒಟ್ಟಿನಲ್ಲಿ ತ್ಯಾಗರಾಜರು ೨೪ ಸಾವಿರ ಕೃತಿಗಳನ್ನು ರಚಿಸಿರಬಹುದೆಂದು ಅಂದಾಜಿನಲ್ಲಿ ತಿಳಿಯಲ್ಪಟ್ಟಿದೆ ಅವುಗಳಲ್ಲಿ ಪ್ರಸಿದ್ಧವಾದ ಪ್ರಹ್ಲಾದವಿಜಯವೂ, ನೌಕಾಚರಿತ್ರೆಯೂ ಸಂಗೀತ ನಾಟಕಗಳಾಗಿವೆ ಅವುಗಳಲ್ಲಿ ಅವರು ತಮ್ಮ ಭಕ್ತಿಯನ್ನು ನಿರರ್ಗಳವಾಗಿ ತಿಳಿಸಿದ್ದಾರೆ ಅವರು ಅನೇಕ ಜೋಗುಳದ ಹಾಡುಗಳನ್ನೂ, ಲಾಲಿಹಾಡುಗಳನ್ನೂ ರಚಿಸಿರುತ್ತಾರೆ ಆದರೆ ಅವರ ಸಂಗೀತ ಸಂಗ್ರಹಗಳಲ್ಲಿ ನಾಲ್ಕನೆಯ ಒಂದು ಭಾಗ ಮಾತ್ರ ಸಂಗೀತ ಸಾಮ್ರಾಜ್ಯದಲ್ಲಿ ನಮಗೆ ದೊರಕಿರುತ್ತದೆ ಮಿಕ್ಕ ಮೂರು ಭಾಗದಲ್ಲಿನ ಆ ಅಣಿಮುತ್ತುಗಳೆಲ್ಲವೂ ಅವರ ಅಣ್ಣ ಅವರ ಹಸ್ತಲಿಖಿತ ಪ್ರತಿಗಳನ್ನೆಲ್ಲಾ ಬೆಂಕಿಗೆ ಹಾಕಿ ಸುಟ್ಟಾಗ ನಾಶವಾಗಿರಬಹುದೆಂದು ಶಂಕಿಸಲಾಗಿದೆ

ತ್ಯಾಗರಾಜರು ತಮ್ಮ ಸಿದ್ಧಿಯಿಂದ ಭೂಮಿಯಲ್ಲಿ ತಮ್ಮ ಜೀವಮಾನದ ಉದ್ದೇಶವು ಮುಗಿಯುತ್ತಾ ಬರುತ್ತಿರುವುದನ್ನು ಅರಿತರು ತಮ್ಮನ್ನು ಶೀಘ್ರದಲ್ಲಿಯೇ ಅವನ ಹತ್ತಿರ ಕರೆದುಕೊಳ್ಳುವಂತೆ ರಾಮನನ್ನು ಹಗಲೂ ರಾತ್ರಿಯೂ ಪ್ರಾರ್ಥಿಸುತ್ತಿದ್ದರು ಮೊದಲಿಗಿಂತಲೂ ಹೆಚ್ಚಾಗಿ ಎಲ್ಲಾವಿಷಯಗಳಲ್ಲಿಯೂ ಅನಾಸಕ್ತರೂ, ನಿಧಾನಸ್ತರೂ ಆಗುತ್ತಾ ತಮ್ಮ ಮುಖ್ಯವಾದ ಅವಶ್ಯಕತೆಗಳನ್ನೂ ಅಲಕ್ಷಿಸುತಾ ಬಂದರು ಒಂದು ದಿವಸ ಶಿಷ್ಯರನ್ನೆಲ್ಲಾ ಕರೆದು ಅವರ ರಾಮನು ಅವರ ಪ್ರಾರ್ಥನೆಯನ್ನು ಲಾಲಿಸಿ ಇನ್ನು ಹತ್ತು ತಿಂಗಳಲ್ಲಿ ಅವರನ್ನು ಅವನ ಪಾದಾರವಿಂದಕ್ಕೆ ಸೇರಿಸಿಕೊಳ್ಳಲು ಮಾತುಕೊಟ್ಟಿರುವುದನ್ನು ತಮ್ಮ ಸಾಕ್ಷಾತ್ಕಾರದಿಂದ ಅರಿತು ತಿಳಿಸಿದರು ಅನಂತರ ಅವರ ಶಿಷ್ಯರಿಗೆ ಅವರ ಸಮಾಧಿಯ ಅಳತೆಯನ್ನೂ, ಯಾವ ಸರಹದ್ದಿನಲ್ಲಿ ಅವರ ಪಾರ್ಥಿವಶರೀರದ ಅಂತ್ಯಕ್ರಿಯೆಯನ್ನು ಮಾಡಬೇಕೆಂಬುದನ್ನೂ ವಿಸ್ತಾರವಾಗಿ ತಿಳಿಸಿದರು ಅಲ್ಲದೆ ಅವರ ಸಂಗೀತವನ್ನು ಜೀವಂತವಾಗಿಯೂ, ಶಾಶ್ವತವಾಗಿಯೂ ಇರುವಂತೆ ಮಾಡಿ ಭಗವಂತನ ಸಾಕ್ಷಾತ್ಕಾರಕ್ಕೆ ಸಂಗೀತವೇ ಮಾರ್ಗವೆಂಬುದನ್ನು ಪ್ರಚಾರಮಾಡಬೇಕೆಂಬುದನ್ನೂ ಬೋಧಿಸಿದರು ಯಾರೂ ಸಂಗೀತದಿಂದ ಸಂಪಾದಿಸಿದ ಹಣವನ್ನು ತಮ್ಮ ಜೀವನಾಧಾರಕ್ಕೆ ಉಪಯೋಗಿಸಬಾರದೆಂದು ಒತ್ತಿ ಹೇಳಿದರು

ಅವರ ಅಂತಿಮಕಾಲಕ್ಕೆ ಇನ್ನು ನಾಲ್ಕು ದಿವಸ ಮಾತ್ರ ಇರುವಾಗ ಅವರು ಸನ್ಯಾಸಿಗಳ ಕ್ರಮವನ್ನು ಅನುಸರಿಸಿ ಪರಮಹಂಸ ಬ್ರಹ್ಮಾನಂದೇಂದ್ರ ಸ್ವಾಮಿಯವರ ಹತ್ತಿರ ಸನ್ಯಾಸಾಶ್ರಮವನ್ನು ಸ್ವೀಕರಿಸಿ, ತಮ್ಮನ್ನು ನಾದಬ್ರಹ್ಮಾನಂದಸ್ವಾಮಿ ಎಂದು ಕರೆಮುಕೊಂಡರು ಅವರ ಉತ್ತಮಣದ ದಿವಸವು ಉದಯವಾಗಲು ಅವರು ತಮ್ಮ ಶಿಷ್ಯರನ್ನೆಲ್ಲಾ ಕರೆದು ತಮ್ಮ ಸುತ್ತಲೂ ಕುಳಿತು ತಮಗೆ ಇಷ್ಟವಾಗಿದ್ದ ಕೃತಿಗಳಿಂದ ಭಜನಮಾಡುವಂತೆ ಹೇಳಿದರು ಅನಂತರ ತ್ಯಾಗರಾಜರು ತಮ್ಮ ಕೈಗಳನ್ನು ಜೋಡಿಸಿಕೊಂಡು, ಕಣ್ಣನ್ನು ಮುಚ್ಚಿಕೊಂಡು ಸಮಾಧಿ ಸ್ಥಿತಿಗೆ ಇಳಿದರು ಗೊತ್ತಾದ ವೇಳೆಯ ಬರಲು ಒಂದು ಗಹನವಾದ ನಾದವು ಹೊರಹೊಮ್ಮಿತು ಇದ್ದಕ್ಕಿದ್ದಂತೆ ಅವರ ತಲೆಬುರುಡೆಯು ಸೀಳಿ ಅಲ್ಲಿಂದ ಒಂದು ಪ್ರಕಾಶಮಾನವಾದ ಜ್ಯೋತಿಯು ಹೊರಬಂದು ಆಕಾಶದಲ್ಲಿ ಉತ್ತರ ದಿಕ್ಕಿಗೆ ಹೋಗಿ ಅಲ್ಲಿಯೇ ಲೀನವಾದುದನ್ನು ಎಲ್ಲರೂ ಕಂಡರು ಅವರ ಆತ್ಮವು ನಾದಬ್ರಹ್ಮದಲ್ಲಿ ಮುಳುಗಿಹೋಯಿತು ಅವರು ಪುಷ್ಯಬಹುಳ ಏಕಾದಶಿಯಂದು ಮುಕ್ತಿಪಡೆದರು ಅನಂತರ ಸಕಲ ಗೌರವಗಳೊಡನೆ ಅವರ ಭೌತಿಕ ಶರೀರವನ್ನು ಸಂಗೀತದೊಂದಿಗೆ ಕೊಂಡೊಯ್ದು ಕಾವೇರಿ ತೀರದಲ್ಲಿ ಅವರ ಗುರು ಸೊಂರಿ ವೆಂಕಟರಮಣಯ್ಯನವರ ಸಮಾಧಿಯ ಸಮೀಪದಲ್ಲಿ ಅವರ ಇಷ್ಟದ ಪ್ರಕಾರ ಸಮಾಧಿ ಮಾಡಲಾಯಿತು

ಮುಂದೆ ಅವರ ಸಮಾಧಿಯ ಮೇಲ ಬೃಂದಾವನವನ್ನು ನಿರ್ಮಿಸಿ ಅಲ್ಲಿ ಅವರ ದೇವಾಲಯವನ್ನು ಕಟ್ಟಿದರು ತಿರುವಯ್ಯಾರಿನಲ್ಲಿ ಅವರ ಪೂಜಾ ಉತ್ಸವವನ್ನು ಸಂಗೀತಾಭಿಮಾನಿಗಳು ಪ್ರತಿ ವರ್ಷವೂ ಬಹಳ ಧಾರ್ಮಿಕವಾಗಿ ನಡೆಸುತ್ತಾರೆ ಆಗ ಅನೇಕ ಸಂಗೀತ ವಿದ್ವಾಂಸರು ಕಲೆತು ತ್ಯಾಗರಾಜರ ಪಂಚರತ್ನ ಕೃತಿಗಳನ್ನು ಎಲ್ಲರೂ ಒಟ್ಟಿಗೆ ಸುಶ್ರಾವ್ಯವಾಗಿ ಹಾಡುತ್ತಾರೆ ಇದನ್ನು ಕೇಳಿ ಆನಂದಿಸಲು ಸಾವಿರಾರು ಮಂದಿ ಬಂದು ತಿರುವಯ್ಯಾರಿನಲ್ಲಿ ಸೇರುತ್ತಾರೆ ತ್ಯಾಗರಾಜರ ಆರಾಧನೋತ್ಸವವು ಅತ್ಯಂತ ಪ್ರಮುಖವಾದ ಸಂಗೀತದ ಉತ್ಸವವಾಗಿದೆ

ತ್ಯಾಗರಾಜರ ಕೃತಿಗಳು ಅಮರವಾಗಿ ಈ ೧೩೨ ವರ್ಷಗಳಲ್ಲಿ ಬಹಳ ಪ್ರಸಿದ್ಧಿಯನ್ನೂ, ಪ್ರಾಮುಖ್ಯತೆಯನ್ನೂ ಪಡೆದಿವೆ ಅವರ ಮಾದರಿಯಾದ ಸರಳ ಜೀವನದಿಂದ ಅವರು ಎಲ್ಲರಿಗೂ ಮನುಷ್ಯನ ಸುಖಕ್ಕೆ ಐಶ್ವರ್ಯವು ಎಂದಿಗೂ ಮುಖ್ಯವಲ್ಲವೆಂಬುದನ್ನು ತೋರಿಸಿದರು ಅವರು ಸಂಗೀತ ಸಾಮ್ರಾಜ್ಯಕ್ಕೆ ಬಹಳ ಅಮೂಲ್ಯವಾದ ನಿಧಿಯನ್ನು ಕೊಟ್ಟ ಸಂಗೀತ ಸಂತರೆಂದು ಕರೆಯಲ್ಪಟ್ಟ ಅಮರರಾದರು

* * *




# TIRUMALA TIRUPATI DEVASTHANAMS, TIRUPATI.

# FESTIVALS OF 1999

| | | | | |
|---|---|---|---|---|
| 14-1-99 | | | Thursday | Bhogi |
| 15-1-99 | | | Friday | Sankranthi |
| 16-1-99 | | | Saturday | Kanuma |
| 24-1-99 | | | Sunday | Radhasaptami |
| 29-1-99 | | | Friday | Chandanabhishekam, Sri Kapileswara Swamy Temple Tirupati |
| 27-1-99 | to | 31-1 99 | Wednesday to Sunday | Float festival, Sri Govindarajaswamy Temple Tirupati |
| 7-2-99 | to | 15-2-99 | Sunday to Monday | Annual Brahmotsavam Sri Kalyana Venkateswara Swamy Temple, Srinivasamangapuram |
| 13-2-99 | to | 17-2-99 | Saturday to Wednesday | Annual Brahmotsavam Sri Kapileswara Swamy Temple, Tirupati |
| 25-2-99 | to | 1-3-99 | Thursday to Monday | Float Festival, Tirumala Temple |
| 27-2-99 | | | Saturday | Annamacharya Vardhanti |
| 3-3-99 | | | Wednesday | Sri Lakshmi Jayanthi |
| 16-3-99 | to | 24-3-99 | Tuesday to | Annual Brahmotsavam, Sri Kodanda Ramaswamy |

| | | | | |
|---|---|---|---|---|
| 16-8-99 | | | Monday | Garuda Panchami |
| 20-8-99 | | | Friday | Varalakshmi Vratam |
| 21-8-99 | to | 24-8-99 | Saturday to Tuesday | Pavithrotsavam, Tirumala Temple |
| 24-8-99 | to | 26-8-99 | Tuesday to Thursday | Float Festival Sri Venugopalaswamy Temple, Karvetinagaram |
| 26-8-99 | | | Thursday | Vighanasa Jayanthi |
| 27-8-99 | | | Friday | Gayathri Japam |
| 3-9-99 | | | Friday | Gokulashtami |
| 11-9-99 | | | Saturday | Sri Balarama Jayanthi |
| 12-9-99 | | | Sunday | Sri Varaha Jayanthi |
| 13-9-99 | | | Monday | Vinayaka Chaturthi |
| 13-9-99 | to | 21-9-99 | Monday to Tuesday | Annual Brahmotsavam, Tirumala Temple |
| 17-9-99 | | | Friday | Sri T T Garuda Seva |
| 18-9-99 | | | Saturday | Sri T T Golden Chariot |
| 22-9-99 | | | Wednesday | Vamana Jayanthi |
| 24-9-99 | | | Friday | Anantha Padmanabha Vratham |
| 9-10-99 | | | Saturday | Mahalaya Amavasya |
| 10-10-99 | | | Sunday | Kalasa Sthapanam Sri |



Lord Venkateswara (Utsava Murthy) with Sridevi and Bhudevi

**TIRUMALA TIRUPATI DEVASTHANAMS, TIRUPATI**

# SAPTHAGIRI 1999

**JANUARY**

| SUN | MON | TUE | WED | THU | FRI | SAT |
|---|---|---|---|---|---|---|
| 31 | * | * | * | * | 1 | 2 |
| 3 | 4 | 5 | 6 | 7 | 8 | 9 |
| 10 | 11 | 12 | 13 | 14 | 15 | 16 |
| 17 | 18 | 19 | 20 | 21 | 22 | 23 |
| 24 | 25 | 26 | 27 | 28 | 29 | 30 |

**FEBRUARY**

| SUN | MON | TUE | WED | THU | FRI | SAT |
|---|---|---|---|---|---|---|
| * | 1 | 2 | 3 | 4 | 5 | 6 |
| 7 | 8 | 9 | 10 | 11 | 12 | 13 |
| 14 | 15 | 16 | 17 | 18 | 19 | 20 |
| 21 | 22 | 23 | 24 | 25 | 26 | 27 |
| 28 | * | * | * | * | * | * |

**MARCH**

| SUN | MON | TUE | WED | THU | FRI | SAT |
|---|---|---|---|---|---|---|
| * | 1 | 2 | 3 | 4 | 5 | 6 |
| 7 | 8 | 9 | 10 | 11 | 12 | 13 |
| 14 | 15 | 16 | 17 | 18 | 19 | 20 |
| 21 | 22 | 23 | 24 | 25 | 26 | 27 |
| 28 | 29 | 30 | 31 | * | * | * |

**APRIL**

| SUN | MON | TUE | WED | THU | FRI | SAT |
|---|---|---|---|---|---|---|
| * | * | * | * | 1 | 2 | 3 |
| 4 | 5 | 6 | 7 | 8 | 9 | 10 |
| 11 | 12 | 13 | 14 | 15 | 16 | 17 |
| 18 | 19 | 20 | 21 | 22 | [illegible] | 24 |
| 25 | 26 | 27 | 28 | 29 | 30 | * |

**MAY**

| SUN | MON | TUE | WED | THU | FRI | SAT |
|---|---|---|---|---|---|---|
| 30 | 31 | * | * | * | * | 1 |
| 2 | 3 | 4 | 5 | 6 | 7 | 8 |
| 9 | 10 | 11 | 12 | 13 | 14 | 15 |
| 16 | 17 | 18 | 19 | 20 | 21 | 22 |
| 23 | 24 | 25 | 26 | 27 | 28 | 29 |

**JUNE**

| SUN | MON | TUE | WED | THU | FRI | SAT |
|---|---|---|---|---|---|---|
| * | * | 1 | 2 | 3 | 4 | 5 |
| 6 | 7 | 8 | 9 | 10 | 11 | 12 |
| 13 | 14 | 15 | 16 | 17 | 18 | 19 |
| 20 | 21 | 22 | 23 | 24 | 25 | 26 |
| 27 | 28 | 29 | 30 | * | * | * |

**JULY**

| SUN | MON | TUE | WED | THU | FRI | SAT |
|---|---|---|---|---|---|---|
| * | * | * | * | 1 | 2 | 3 |
| 4 | 5 | 6 | 7 | 8 | 9 | 10 |
| 11 | 12 | 13 | 14 | 15 | 16 | 17 |
| 18 | 19 | 20 | 21 | 22 | 23 | 24 |
| 25 | 26 | 27 | 28 | 29 | 30 | 31 |

**AUGUST**

| SUN | MON | TUE | WED | THU | FRI | SAT |
|---|---|---|---|---|---|---|
| 1 | 2 | 3 | 4 | 5 | 6 | 7 |
| 8 | 9 | 10 | 11 | 12 | 13 | [illegible] |
| 15 | 16 | 17 | 18 | 19 | [illegible] | [illegible] |
| 22 | 23 | 24 | 25 | 26 | 27 | [illegible] |
| 29 | 30 | 31 | * | * | * | [illegible] |

**OCTOBER**

| SUN | MON | TUE | WED | THU | FRI | SAT |
|---|---|---|---|---|---|---|
| 31 | * | * | * | * | 1 | 2 |
| 3 | 4 | 5 | 6 | 7 | 8 | 9 |
| 10 | 11 | 12 | 13 | 14 | 15 | 16 |
| 17 | 18 | 19 | 20 | 21 | 22 | 23 |
| 24 | 25 | 26 | 27 | 28 | 29 | 30 |

**SEPTEMBER**

| SUN | MON | TUE | WED | THU | FRI | SAT |
|---|---|---|---|---|---|---|
| * | * | * | 1 | 2 | 3 | 4 |
| 5 | 6 | 7 | 8 | 9 | 10 | 11 |
| 12 | 13 | 14 | 15 | 16 | 17 | 18 |
| 19 | 20 | 21 | 22 | 23 | 24 | 25 |
| 26 | 27 | 28 | 29 | 30 | * | * |

**NOVEMBER**

| SUN | MON | TUE | WED | THU | FRI | SAT |
|---|---|---|---|---|---|---|
| * | 1 | 2 | 3 | 4 | 5 | 6 |
| 7 | 8 | 9 | 10 | 11 | 12 | 13 |
| 14 | 15 | 16 | 17 | 18 | 19 | 20 |
| 21 | 22 | 23 | 24 | 25 | 26 | 27 |
| 28 | 29 | 30 | * | * | * | * |

**DECEMBER**

| SUN | MON | TUE | WED | THU | FRI | SAT |
|---|---|---|---|---|---|---|
| * | * | * | 1 | 2 | [illegible] | [illegible] |
| 5 | 6 | 7 | 8 | 9 | 10 | [illegible] |
| 12 | 13 | 14 | 15 | 16 | 17 | [illegible] |
| 19 | 20 | 21 | 22 | 23 | 24 | [illegible] |
| 26 | 27 | 28 | 29 | 30 | 31 | [illegible] |

| | | | | |
|---|---|---|---|---|
| | | | [illegible] | Telugu Ugadi |
| 25-3-99 | | | Thursday | Srirama Navami |
| 26-3-99 | to | 28-3-99 | Friday to Sunday | Float Festival, Sri Vedanarayana Swamy Temple, Nagulapuram |
| 29-3-99 | to | 31-3-99 | Monday to Wednesday | Vasanthotsavam, Tirumala Temple |
| 14-4-99 | | | Wednesday | Tamil New Years day |
| 20-4-99 | | | Tuesday | Sri Sankara Jayanthi |
| 24-4-99 | to | 26-4-99 | Saturday to Monday | Sri Padmavathi Parinayotsavam, Tirumala |
| 30-4-99 | to | 8-5-99 | Friday to Saturday | Annual Brahmotsavam, Sri Vedanarayana Swamy Temple Nagulapuram |
| 1-5-99 | | | Saturday | Sri Annamacharya Jayanthi |
| 10-5-99 | | | Monday | Sri Hanuma Jayanthi |
| 11-5 99 | | | Tuesday | Tirupati Ganga Jathara |
| 22-5-99 | to | 30-5-99 | Saturday to Sunday | Annual Brahmotsavam, Sri Govindarajaswamy Temple Tirupati |
| 24 6 99 | to | 28-6-99 | Thursday to Monday | Sri Padmavathi Ammavari Temple Float begins |
| 25 6-99 | to | 27 6 99 | Friday to Sunday | Jyeshtabhishekam Tirumala Temple |
| 16 7 99 | | | Friday | Anivara Asthanam, Tirumala (Dakshinayanam begins) |
| 18 7-99 | | | Sunday | Sakshatkara Vaibhavam Sri Kalyana Venkateswara Swamy Temple Srinivasamangapuram |
| 22 7 99 | to | 24 7 99 | Thursday to Saturday | Jyeshtabhishekam Sri Govindaraja Swamy Temple, Tirupati |

| | | | | |
|---|---|---|---|---|
| 11-10-99 | to | 19-10-99 | Monday to Tuesday | Navarathri Brahmotsavam Tirumala Temple |
| 15-10-99 | | | Friday | Sri T T Navarathri Brahmotsavam Garuda Seva, Saraswathi Puja |
| 16-10-99 | | | Saturday | Sri T T Navarathri Brahmotsavam Golden Chariot |
| 17-10-99 | | | Sunday | Durgastami |
| 19-10-99 | | | Tuesday | Vijaya Dasami |
| 6-11-99 | | | Saturday | Naraka Chaturdasi |
| 7-11-99 | | | Sunday | Deepavali |
| 15-11-99 | | | Monday | Pushpayagam Tirumala Temple |
| 19-11-99 | to | 23-11-99 | Friday to Tuesday | Float Festival, Sri Kalyana Venkateswara Swamy Temple, Narayanavanam |
| 23-11-99 | | | Tuesday | Krittika Deepotsavam Sri Kapileswara Swamy Temple, Tirupati |
| 5-12-99 | to | 13-12-99 | Sunday to Monday | Annual Brahmotsavam, Sri Padmavathi Ammavari Temple, Tiruchanoor |
| 6-12-99 | | | Monday | Karthika Somavara Abhishekam Sri Kapileswara Swamy Temple Tirupati |
| 13-12 99 | | | Monday | Sri P A T Panchami Theertham |
| 16-12-99 | | | Thursday | Dhanurmasam begins |
| 19-12-99 | | | Sunday | Gita Jayanti Vaikunta Ekadasi |
| 20-12-99 | to | 22-12-99 | Monday to Wednesday | Float festival Sri Kapileswara Swamy Temple Tirupati |

# ಭಾರತೀಯ ಕಲ್ಪನೆಯಲ್ಲಿ ಸರಸ್ವತಿ

ಪ್ರೊ|| ಎಚ್. ವಿ. ನರಸಿಂಹಮೂರ್ತಿ.

ವಾಗ್ದೇವಿ ಸರಸ್ವತಿಯ ಪರಿಕಲ್ಪನೆ ತುಂಬ ಪ್ರಾಚೀನ ಭಾರತೀಯರ ಜೀವನ - ಸಾಹಿತ್ಯ - ಸಂಸ್ಕೃತಿಗಳನ್ನೆಲ್ಲ ಶ್ರೀಮಂತಗೊಳಿಸಿದವಳು ಅವಳು ಶಕ್ತಿ ದೇವತೆಯ ಪ್ರಮುಖ ಪ್ರಾದುರ್ಭಾವಗಳಲ್ಲೊಂದಾಗಿ, ಋಗ್ವೇದದ ಕಾಲದಿಂದಲೂ ಭಾರತೀಯರ ಜೀವನಕ್ಕೆ ಬೆಳಕು ನೀಡಿದವಳು, ಸರಸ್ವತಿ

ನಾಗರಿಕತೆಗಳ ಹುಟ್ಟು - ಬೆಳವಣಿಗೆಗಳಲ್ಲಿ ನದಿಗಳ ಪಾತ್ರ ತುಂಬ ಮಹತ್ತದ್ದು ನೀರಿಲ್ಲದೆ ಬದುಕುಂಟೆ? ಹಾಗಾಗಿ ಸಂಸ್ಕೃತದಲ್ಲಿ ನೀರಿಗೆ 'ಜೀವನಂ' ಎಂಬುದೊಂದು ಪರ್ಯಾಯ ಪದ ಆದ್ದರಿಂದಲೇ ವೇದಕಾಲದ ಋಷಿಗಳು ನದಿಗಳನ್ನು ಹಾಡಿ ಹೊಗಳಿದ್ದಾರೆ ಋಗ್ವೇದದಲ್ಲಿನ ಸಪ್ತಸಿಂಧುಗಳಲ್ಲಿ ಸರಸ್ವತಿಯ ಸ್ಥಾನ ವಿಶಿಷ್ಟವಾದುದು ಋಗ್ವೇದದ ಒಬ್ಬ ಋಷಿ ಸರಸ್ವತಿಯನ್ನು ಹೀಗೆ ಬಣ್ಣಿಸುತ್ತಾನೆ

ಪಾವಕಾ ನಃ ಸರಸ್ವತೀ
ವಾಜೇಭಿರ್ವಾಜಿನೀವತೀ
ಯಜ್ಞಂ ವಷ್ಟು ಧಿಯಾವಸುಃ
ಚೋದಯಿತ್ರೀ ಸೂನೃತಾನಾಂ
ಚೇತಂತೀ ಸುಮತೀನಾಂ
ಯಜ್ಞಂ ದಧೇ ಸರಸ್ವತೀ
ಮಹೋ ಅರ್ಣಃ ಸರಸ್ವತೀ
ಪಚೇತಯತಿ ಕೇತುನಾ
ಧಿಯೋ ವಿಶ್ವಾ ವಿರಾಜತಿ
(ಋ ವೇ ೧-೩-೧೦-೧೧-೧೨)

ಪಾವನಗೊಳಿಸುವಳೂ, ಅನ್ನದಾತೆಯೂ, ಸಂಪತ್ತಿಯೆಂಬ ಪೂಜೆಯ ಪ್ರತಿಫಲ ಕೊಡುವವಳೂ ಆದ ಸರಸ್ವತಿ, ನಾವು ಕೊಡುವ ಹವಿಸ್ಸಿನಿಂದ ನಮ್ಮ ಯಜ್ಞಕ್ಕೆ ಆಕರ್ಷಿತಳಾಗಿ ಬರಲಿ, ಸತ್ಯವಾದ ನುಡಿಗೆ ಪ್ರೇರಣೆ ಕೊಡುವವಳೂ, ಸನ್ಮತಿಯನ್ನು ಪ್ರಚೋದಿಸುವವಳೂ ಆದ ಸರಸ್ವತಿ ನಮ್ಮ ಯಜ್ಞವನ್ನು ಒಪ್ಪಿದ್ದಾಳೆ ತನ್ನ ಕಾರ್ಯಗಳಿಂದ ಮಹಾನದಿ ಸರಸ್ವತಿ ಪ್ರಚೋದಿಸುತ್ತಾಳೆ ಮತ್ತು ಬುದ್ಧಿಯನ್ನು ಬೆಳಗುತ್ತಾಳೆ

ಇದು ಸರಸ್ವತಿಯನ್ನು ಕುರಿತು ಆ ನದಿಯ ತಟಗಳಲ್ಲಿದ್ದ ಜನರು ಮಾಡಿದ ಪ್ರಾರ್ಥನೆ ಋಗ್ವೇದದಲ್ಲಿ ಬೇರೆ ಯಾವ ನದಿಗೂ ಇಲ್ಲದ ಮಹತ್ವವನ್ನು ಸರಸ್ವತೀ ನದಿಗೆ ಕೊಡಲಾಗಿದೆ ಸರಸ್ವತಿ ಶುಭೆ, ಸುಭಗೆ, ಶುಭ್ರ, ಭದ್ರೆ, ಸರಸ್ವತಿ, ಕಲ್ಯಾಣಮಯಿ, ಅನ್ನವತಿ, ಎಲ್ಲರನ್ನೂ ಪುನೀತಗೊಳಿಸುವ ಈ ನದಿ ಪ್ರವಾಹದಿಂದ ತುಂಬಿ ಬಂದು ಧನ - ಧಾನ್ಯಗಳನ್ನು ಕರುಣಿಸದೇಕೆಂದು ಋಷಿಗಳು ಬೇಡಿದ್ದಾರೆ ಸರಸ್ವತೀ ಸೂತ್ರದ ಪಠಣದಿಂದ ವಾಗ್ಮಿಗಳಾಗುತ್ತಾರೆ - ಎಂದು ಋಗ್ವಿಧಾನ ಹೇಳಿದೆ

ಆರಣ್ಯಕಗಳಲ್ಲಿ 'ಯಜ್ಞಂವಷ್ಟುಧಿಯಾವಸು, ವಾಗ್ಭೈಧಿಯಾವಸು' - ಎಂದು ಸರಸ್ವತಿಗೆ ಧನನಿಮಿತ್ತತ್ವ ಉಂಟೆಂದು ಹೇಳಲಾಗಿದೆ ಶತಪಥ ಬ್ರಾಹ್ಮಣ ಹಾಗೂ ಐತರೇಯ ಬ್ರಾಹ್ಮಣಗಳಲ್ಲಿ ಸರಸ್ವತಿಯನ್ನು ವಾಗ್ದೇವತೆಯೆಂದೇ ಕರೆಯಲಾಗಿದೆ

ಮಹಾಭಾರತದಲ್ಲಿ ಸರಸ್ವತೀ ನದಿಗೆ ಸಂಬಂಧಿಸಿದಂತೆ ಅನೇಕ ಉಲ್ಲೇಖಗಳಿವೆ ಶಲ್ಯಪರ್ವದ ಉಪಪರ್ವವಾದ ಗದಾಪರ್ವದಲ್ಲಿ ಬಲರಾಮ ತೀರ್ಥಕ್ಷೇತ್ರ ಸಂದರ್ಶನ ಮಾಡುವ ಸಂದರ್ಭದಲ್ಲಿ ಈ ವಿವರಗಳು ದೊರೆಯುತ್ತವೆ ಸರಸ್ವತೀನದಿ ದಕ್ಷಿಣಾಭಿಮುಖವಾಗಿದ್ದು ಪಶ್ಚಿಮಾಭಿಮುಖವಾಗುತ್ತದೆ ನದಿಯ ದಡವನ್ನು ತಂಡೋಪತಂಡವಾಗಿ ಬಳಸಿಕೊಂಡ ಋಷಿಗಳಿಗಾಗಿ, ಅವರ ಸ್ವಾಧ್ಯಾಯ, ಅಗ್ನಿಹೋತ್ರ ಕ್ರಿಯೆಗಳಿಗಾಗಿ 'ಋಷೀಣಾಂ ಪುಣ್ಯತಪಸಾಂ ಕಾರುಣ್ಯಾತ್ ಜನಮೇಜಯ' - ಸರಸ್ವತೀನದಿ ಪಶ್ಚಿಮಾಭಿಮುಖವಾದಾಗ ನಿರ್ಮಿತವಾದುದು, ನೈಮಿಷಾರಣ್ಯ ಸರಸ್ವತೀ ನಾನಾವಿದವಾದ ಪಕ್ಷಿಸಂಕುಲಗಳಿಗೆ ಆಶ್ರಯಧಾಮವಾಗಿತ್ತು ಅನೇಕ ವೃಕ್ಷಗಳಿಂದ ಕೂಡಿ 'ದೃಷ್ಟಿಕಾಂತಂ ಮನೋಹರಂ' ಆಗಿದ್ದ ನದಿ, ಸರಸ್ವತೀ

ಪುರಾಣಗಳು ಸರಸ್ವತಿಯನ್ನು ಬ್ರಹ್ಮನ ರಾಣಿಯನ್ನಾಗಿಸಿದವು ದೇವೀಭಾಗವತ ಸರಸ್ವತಿಯನ್ನು ಶ್ರೀಕೃಷ್ಣನ ನಾಲಿಗೆಯಿಂದ ಹುಟ್ಟಿದವಳೆಂದು ಹೇಳುತ್ತದೆ ಶ್ರೀಕೃಷ್ಣನು ರಾಧೆಯನ್ನು ಮಾತ್ರ ತನ್ನ ಬಳಿ ಇಟ್ಟುಕೊಂಡು ಸರಸ್ವತಿಯನ್ನು ವಿಷ್ಣುವಿಗೆ ಅರ್ಪಿಸಿದನಂತೆ ಪುರಾಣದ ಪ್ರಕಾರ ವಿಷ್ಣುವಿಗೆ ಮೂರು ಜನ ಮಡದಿಯರು - ಗಂಗೆ, ಲಕ್ಷ್ಮೀ, ಸರಸ್ವತಿ ಆದರೆ ಒಂದು ಸಲ ವಿಷ್ಣು - ಗಂಗೆಯರ ಪ್ರೇಮವನ್ನು ಕಂಡು ಸರಸ್ವತಿ ಅಸೂಯೆಯಿಂದ ಮಾತನಾಡಿದಳಂತೆ ಆಗ ವಿಷ್ಣು ಸರಸ್ವತಿಯನ್ನು ಬ್ರಹ್ಮನಿಗೆ ಕೊಟ್ಟನಂತೆ ಗಂಗೆ ಸರಸ್ವತಿಗೆ ಭೂಮಿಯಲ್ಲಿ ನದಿಯಾಗಿ ಹರಿ - ಎಂದು ಶಾಪಕೊಟ್ಟಳಂತೆ ಸರಸ್ವತಿಯೂ ಗಂಗೆಗೆ ಇದೇರೀತಿ ಶಾಪಕೊಟ್ಟಳೆಂದೂ, ಲಕ್ಷ್ಮಿ ಗಂಗೆಯ ಪಕ್ಷ ವಹಿಸಿದಳೆಂದೂ, ಅವಳಿಗೂ ಶಾಪಬಂದು, ಅವಳೂ ನದಿಯಾದಳೆಂದೂ ಪುರಾ



ವಾರಿಜಾಸನೆ ಸಕಲ ಶಾಸ್ತ್ರ ವಿ
ಚಾರದುದ್ಭವೆ ವಚನರಚನೋ
ದ್ಧಾರೆ ಶ್ರುತಿ ಪೌರಾಣದಾಗಮ
ಸಿದ್ಧಿದಾಯಕಿಯೆ

ಶೌರಿ ಸುರಪತಿ ಸಕಲ ಮುನಿಜನ
ಸ್ಸೂರಿಗಳಿಗನು ಪಮದ ಯುಕುತಿಯೆ
ಶಾರದೆಯೆ ನರ್ತಿಸುಗೆ ನಲಿದೊಲಿದೆನ್ನ
ಜಿಹ್ವೆಯಲಿ

ಆದಿನಾರಾಯಣಿ ಪರಾಯಣಿ
ನಾದಮಯೆ ಗಜಲಕ್ಷ್ಮಿ ಸತ್ವಗು
ಣಾದಿ ದೇವತೆ ಅಮರ ವಂದಿತ
ಪಾದ ಪಂಕರುಹೆ

ವೇದ ಮಾತೆಯೆ ವಿಶ್ವತೋಮುಖಿ
ಯೈದು ಭೂತಾಧಾರಿ ಯೆನಿಪೀ
ದ್ವಾದಶಾತ್ಮಜ್ಯೋತಿರೂಪಿಯೆ
ನಾದೆ ಶಾರದೆಯೆ



ಣದ ಕತೆ ಪುರಾಣದ ಪ್ರಕಾರ ಸರಸ್ವತಿ ವಿಷ್ಣುಪತ್ನಿ ಅಂಶತಃ ನದಿ ಮತ್ತು ಬ್ರಾಹ್ಮೀ ರೂಪದಲ್ಲಿರುವ ವಳು ಬ್ರಹ್ಮನ ರಾಣಿ ಸರಸ್ವತಿ ಎಂದಾಗ ಮನುಷ್ಯ ಸೃಷ್ಟಿಯಲ್ಲಿನ ಕಲ್ಪನಾಶಕ್ತಿ, ಪ್ರತಿಭಾಸಂಪತ್ತು, ಬುದ್ಧಿ ಕೌಶಲ - ಇವುಗಳ ಮೂರ್ತಸ್ವರೂಪ ಎಂದು ಮಾತ್ರ ಅರ್ಥೈಸಿದರೆ ಪುರಾಣದ ಕಥೆ ಅರ್ಥವಾಗುತ್ತದೆ

ಪುರಾಣದ ಕಥೆ ಏನೇ ಇರಲಿ, ಇಂದು ಸರಸ್ವತಿ ಗಣಪತಿಯಷ್ಟೇ ಪೂಜ್ಯಳು ಈ ಶಕ್ತಿಯ ಸಾರ್ವತ್ರಿಕತೆ ಅದ್ಭುತ ಈಕೆಯ ಪೂಜೆಯಲ್ಲಿ ಜಾತೀಯತೆ ಇಲ್ಲ; ಗಂಡು - ಹೆಣ್ಣೆಂಬುದಿಲ್ಲ ವಿದ್ಯೆ ಸಾಹಿತ್ಯ ಕಲೆಗಳ ಅಧಿದೇವತೆಯಾದ ಸರಸ್ವತಿಯ ಒಂದು ಕೈಯಲ್ಲಿ ಪುಸ್ತಕ, ಇನ್ನೊಂದರಲ್ಲಿ ಜಪಸರ, ಮತ್ತೊಂದರಲ್ಲಿ ಕಮಂಡಲು, ಇನ್ನೊಂದರಲ್ಲಿ ವೀಣೆ ಆಕೆ ಶುಕ್ಲವರ್ಣಳು, ಶುಕ್ಲಾಂಬರಧರಳು, ಶ್ವೇತಪದ್ಮಾಸನೆ, ನವರಾತ್ರಿ ಸಪ್ತಮಿಯ ಅಧಿದೇವತೆ ಶಕ್ತಿದೇವತೆಯ ಮೂರು ಸ್ವರೂಪಗಳಲ್ಲೊಬ್ಬಳು ಹಂಸವಾಹನೆ, ಈಕೆ ಹಂಸ, ಪದ್ಮ - ಇವೆರಡೂ ಆಧ್ಯಾತ್ಮಿಕ ಪ್ರತೀಕಗಳು, ಕಮಲವು ಹೃದಯ ತತ್ವದ ವಿಕಸನ ಹಂಸವು ಆತ್ಮತತ್ವ ಪರಮಾತ್ಮತತ್ವದಲ್ಲಿ ತನ್ನ ಪರಿಪೂರ್ಣತೆಯನ್ನು ಅರಿತುಕೊಳ್ಳುವುದರ ಸಂಕೇತ ಪರಮಹಂಸತ್ವ ಅಧ್ಯಾತ್ಮದ ಉತ್ತುಂಗ ಸ್ಥಿತಿ

ಸಂಸ್ಕೃತ ಸಾಹಿತ್ಯದಲ್ಲಿ ಸರಸ್ವತಿಯ ಬಗೆ - ಬಗೆಯಾದ ವರ್ಣನೆಗಳನ್ನು ಕಾಣುತ್ತೇವೆ ಬ್ರಹ್ಮವೈವರ್ತದ ಒಂದು ಶ್ಲೋಕದಲ್ಲಿ ಸರಸ್ವತಿಯನ್ನು

ಜ್ಞಾನಂ ದೇಹಿ ಸ್ಮೃತಿಂದೇಹಿ
ವಿದ್ಯಾಂ ವಿದ್ಯಾಧಿದೇವತೇ
ಪ್ರತಿಷ್ಠಾಂ ಕವಿತಾಂದೇಹಿ
ಶಕ್ತಿಂ ಶಿಷ್ಯಪ್ರಬೋಧಿಕಾಂ

-ಜ್ಞಾನ, ಸ್ಮೃತಿ, ವಿದ್ಯೆ, ಪ್ರತಿಷ್ಠೆ, ಕವಿತೆ ಮತ್ತು ಶಿಷ್ಯರಿಗೆ ಉಪದೇಶ ಮಾಡುವ ಶಕ್ತಿಕೊಡುವಂತೆ ಪ್ರಾರ್ಥಿಸಲಾಗಿದೆ

ಯಾಜ್ಞವಲ್ಕ್ಯಕೃತ ಸರಸ್ವತೀ ಸ್ತೋತ್ರದಲ್ಲಿ ಹೀಗೆ ಸ್ತುತ್ತಾರೆ

ಬ್ರಹಸ್ವರೂಪಾ ಪರಮಾ
ಜ್ಯೋತಿರೂಪಾ ಸನಾತನೀ
ಸರ್ವವಿದ್ಯಾಧಿ ದೇವೀ ಯಾ
ತಸ್ಮೈವಾಣ್ಯೈ ನಮೋ ನಮಃ
ಯಯಾ ವಿನಾ ಜಗತ್ಸರ್ವಂ
ಮೂಕ ಮುನ್ಮತ್ತವತ್ಸದಾ
ಯಾ ದೇವೀ ವಾಗಧಿಷ್ಠಾತ್ರೀ
ತಸ್ಮೈವಾಣ್ಯೈ ನಮೋ ನಮಃ

ಯಾವ ದೇವಿಯು ಸಾಕ್ಷಾತ್ ಪರಬ್ರಹ್ಮಸ್ವರೂಪಳೋ, ಪರಮಾತ್ಮಸ್ವರೂಪಳೋ, ಸನಾತನಳೋ, ಅಂತಹ ವಿದ್ಯಾಧಿದೇವತೆಯಾದ ಸರಸ್ವತಿಗೆ ನಮಸ್ಕಾರ

ಯಾರು ಇಲ್ಲದಿದ್ದರೆ ಜಗತ್ತೆಲ್ಲವೂ ಮೂಕವಾದಂತೆ, ಉನ್ಮತ್ತವಾದಂತೆ ಕಾಣುವುದೋ ಅಂತಹ ವಾಕ್ಕಿಗೆ ಅಧಿಷ್ಠಾತ್ರಿಯಾದ ಸರಸ್ವತಿಗೆ ನಮಸ್ಕಾರ

ಸರಸ್ವತಿಯನ್ನು ಕುರಿತ ಅನೇಕ ಸ್ತೋತ್ರಗಳಲ್ಲಿ ಬ್ರಹ್ಮಕೃತ ಸರಸ್ವತೀ ಸ್ತೋತ್ರವೂ ಒಂದು ಅಲ್ಲಿ ಸರಸ್ವತಿಯನ್ನು ತಂತ್ರಶಾಸ್ತ್ರದ ಬೀಜಾಕ್ಷರಗಳೊಂದಿಗೆ ಹೀಗೆ ಸ್ತುತಿಸುತ್ತಾರೆ

ಐಂ ಐಂ ಐಂ ಇಷ್ಟಯಂತ್ರೇ
ಕಮಲಭವ ಮುಖಾಂಭೋಜಭೂತಿಸ್ವರೂಪೇ
ರೂಪಾರೂಪ ಪ್ರಕಾಶೇ ಸಕಲ ಗುಣಮಯೇ
ನಿರ್ಗುಣೇ ನಿರ್ವಿಕಾರೇ
ನ ಸ್ಥೂಲೇ ನೈವ ಸೂಕ್ಷ್ಮೇಽಪ್ಯ
ವಿಧಿತ ವಿಭವೇ ನಾಪಿ ವಿಜ್ಞಾನತತ್ವೇ
ವಿಶ್ವೇ ವಿಶ್ವಾಂತರಾತ್ಮೇ
ಸುರವರ ನಮಿತೇ ನಿಷ್ಕಲೇ ನಿತ್ಯಶುದ್ಧೇ

ಐಂ ಐಂ ಐಂ ಎಂಬ ಬೀಜಾಕ್ಷರವನ್ನೇ ಇಷ್ಟಮಂತ್ರವಾಗಿ ಉಳ್ಳ ಮತ್ತು ಬ್ರಹ್ಮನ ಮುಖಕಮಲಕ್ಕೆ ಐಶ್ವರ್ಯ ಸ್ವರೂಪಳಾಗಿರುವ ಹೇ ಮಾತೆ, ನೀನು ಸಾಕಾರಳಾಗಿಯೂ, ನಿರಾಕಾರಳಾಗಿಯೂ ಕಾಣಿಸಿಕೊಳ್ಳುವೆ. ನೀನು ಸ್ಥೂಲಳೂ ಅಲ್ಲ, ಸೂಕ್ಷ್ಮಳೂ ಅಲ್ಲ ನಿನ್ನ ವೈಭವವನ್ನು ಅರಿಯುವುದು ಅಸಾಧ್ಯ ನೀನು ವಿಜ್ಞಾನ ತತ್ವಾತೀತಳು ಈ ವಿಶ್ವವೆಲ್ಲವೂ ನೀನೇ ಈ ವಿಶ್ವಕ್ಕೆ ಅಂತರಾತ್ಮಸ್ವರೂಪಳೂ ನೀನೇ ಸುರೇಶ್ವರನ ನಮಸ್ಕಾರಕ್ಕೆ ಪಾತ್ರಳಾದವಳೂ ನೀನೇ, ನೀನು ಅಖಂಡಳು ಮತ್ತು ನಿತ್ಯಶುದ್ಧಳು

ಮಹಾಕವಿ ಕಾಳಿದಾಸ 'ಚತುರ್ಭುಜೇ, ಚಂದ್ರಕಲಾವತಂಸೇ, ಕುಚೋನ್ನತೇ, ಕುಂಕುಮರಾಗ ಶೋಣೇ' - ಎಂದೆಲ್ಲ ಸರಸ್ವತಿಯನ್ನು ಬಣ್ಣಿಸಿದ್ದಾನೆ ಕವಿದಂಡಿ 'ಸರ್ವಶುಕ್ಲಾ ಸರಸ್ವತೀ'- ಎಂದು ಕೊಂಡಾಡಿದ್ದಾನೆ ಬೃಹಸ್ಪತಿ ವಿರಚಿತವೆನ್ನಲಾದ ಸರಸ್ವತೀ ಸ್ತೋತ್ರವೊಂದರಲ್ಲಿ 'ಮಂತ್ರಪ್ರಿಯಾಂ ಸದಾಹೃದ್ಯಾಂ ಕುಮತಿ ಧ್ವಂಸಕಾರಿಣೀಮ್, ಸ್ವಪ್ರಕಾಶಾಂ ನಿರಾಲಂಬಾಮಜ್ಞಾನ ತಿಮಿರಾಪಹಾಂ' - ಎಂದು ಸ್ತುತಿಸಲ್ಪಟ್ಟಿದ್ದಾಳೆ; ನಮಿಸಲ್ಪಟ್ಟಿದ್ದಾಳೆ

ಕನ್ನಡ ಸಾಹಿತ್ಯದ ಮೊದಲ ಉಪಲಬ್ಧ ಗ್ರಂಥವಾದ ಕವಿರಾಜಮಾರ್ಗದಲ್ಲಿನ ಸರಸ್ವತಿಯ ವರ್ಣನೆ ಹೀಗಿದೆ

ಶ್ರೀ ವಿಶದ ವರ್ಣೇ ಮಧುರಾ
ರಾಮೋಚಿತೆ ಚತುರರುಚಿರ ಪದರಚನೆ ಚಿರಂ
ದೇವಿ ಸರಸ್ವತಿ ಹಂಸೀ
ಭಾವದೆ ನೆಲೆಗೊಳ್ಗೆ ಕೂರ್ತು ಮನ್ಮಾನಸದೊಳ್

'ಶುಭ್ರವರ್ಣೆಯೂ, ಮಧುರಧ್ವನಿಯಿಂದ ಉಚಿತಳಾಗಿ ಕೂಡಿದವಳೂ, ಚತುರ ಮತ್ತು ಸುಂದರ ಪದರಚನೆಯುಳ್ಳವಳೂ ಆದ ಸರಸ್ವತೀ ದೇವಿ ಒಲಿದು ಮಾನಸದಲ್ಲಿ ಹಂಸಿಯ ಭಾವದಿಂದ ಯಾವಾಗಲೂ ನೆಲೆಗೊಳ್ಳಲಿ'

ಪಂಪನ ಕೃತಿಗಳಲ್ಲಿ ಸರಸ್ವತಿಯ ದರ್ಶನವಿದೆ ಪಂಪನಿಗೆ 'ಪರಮ ಜಿನೇಂದ್ರ ವಾಣಿಯೇ ಸರಸ್ವತಿ' ಆದಿಪುರಾಣದಲ್ಲಿ ಆಕೆ 'ವಾಕ್‌ವಧು' ನಾಗವರ್ಮನಿಗೆ 'ಸರ್ವಭಾಷಾ ಸರಸ್ವತೀ' ರನ್ನ ಸರಸ್ವತಿಯನ್ನು ಒಂದು ದೃಷ್ಟಿಯಿಂದ ಅಬಲೆಯೆಂದು ಕರೆದ ಶಬ್ದ ಚಮತ್ಕಾರದ ಬೆನ್ನು ಹತ್ತಿದ ಕವಿ ಅಬಲೆಯಾದ ಸರಸ್ವತಿಯ ಗೋಣುಮುರಿದ ಪಾತಕಕ್ಕೆ ಗುರಿಯಾಗುತ್ತಾನೆ - ಎಂದು ಹೇಳಿದ, ರನ್ನ ನಾಗ ಚಂದ್ರನ 'ವಿದ್ಯಾನಟೀನಾಟ್ಯ' ಕೃತಿಯ ಸರಸ್ವತೀ ಸ್ತುತಿ ಪ್ರಖ್ಯಾತವಾಗಿದೆ ಸರಸ್ವತಿಯು ಆನಂದದ ಆಹಾರದಿಂದ ಈ ಜಗತ್ತನ್ನು ಪೋಷಿಸುತ್ತಾಳೆ, ಸರಸ್ವತಿ ಜನತೆಯ ಅಂತರ್ದೃಷ್ಟಿ, ಕೇವಲ ಜ್ಞಾನಕ್ಕೆ ಮುತ್ತಿನ ಹಾರ, ಸರಸ್ವತಿ ಸರಸ್ವತಿಯು ಕವಿತೆಯೆಂಬ ಬಳ್ಳಿಗೆ ಅಮೃತದ ಮಳೆಗರೆಯುವಳು, ಸರ್ವರಸಗಳಿಂದ ಕೂಡಿದ ನವೀನ ಸೃಷ್ಟಿಯನ್ನೇ ಬೆಳಕಿಗೆ ತರುವವಳು, ಎಲ್ಲ ಸಹೃದಯರ ಹರ್ಷವನ್ನು ಆಕರ್ಷಿಸುವ ಶಕ್ತಿ, ಸರಸ್ವತಿ

ಕವಿ ಕುಮಾರವ್ಯಾಸ 'ಶಾರದೆಯೆ ನರ್ತಿಸುಗೆ ನಲಿದೊಲಿದೆನ್ನ ಜಿಹ್ವೆಯಲಿ' - ಎಂದು ಪ್ರಾರ್ಥಿಸಿದ್ದಾನೆ ಅನೇಕ ದಾಸ ಶ್ರೇಷ್ಠರು ಸರಸ್ವತಿಯನ್ನು ಸ್ತುತಿಸಿದ್ದಾರೆ 'ಪಾಲಿಸೆಮ್ಮ ಮುದ್ದು ಶಾರದೆ', 'ಒಂದೇ ಮನದಿ ಭಜಿಸು ವಾಗ್ದೇವಿಯ', 'ಶರಣೆಂದೆ ವಾಣಿ, ಪೊರೆಯೆ ಕಲ್ಯಾಣಿ' - ಇತ್ಯಾದಿ ಹೊಸಗನ್ನಡ ಕಾವ್ಯದಲ್ಲಿಯೂ ಅಲ್ಲಲ್ಲಿ ವಾಗ್ದೇವಿ ಸರಸ್ವತಿಯ ವರ್ಣನೆಯನ್ನು ಕಾಣುತ್ತೇವೆ

ಹೀಗೆ ನದಿಯಾಗಿ ಹರಿಯುತ್ತಿದ್ದ ಪ್ರಕೃತಿದೇವಿಯನ್ನು ನದೀಶ್ರೇಷ್ಠಳನ್ನಾಗಿ ಪರಿಗ್ರಹಿಸಿ, ದೈವೀಶಕ್ತಿಯನ್ನಾಗಿ ಪರಿವರ್ತಿಸಿ, ಜ್ಞಾನದೇಗುಲದಲ್ಲಿ ಪ್ರತಿಷ್ಠಾಪಿಸಿದ ಭಾರತೀಯರ ಪರಿಕಲ್ಪನೆ ನಿಜಕ್ಕೂ ಅಸದೃಶ, ನವನವೋನ್ಮೇಷಶಾಲಿನಿ

# ತಿರುವಾಯ್ಮೊಳಿಯಲ್ಲಿ ನಾಯಿಕಾಭಾವ

- ಎಂ. ಆರ್. ನರಸಿಂಹನ್.

(ಮುಂದುವರೆದಿದೆ)

## ಭಾಗ - ೪

21. **ಸಪ್ತಮ ಶತಕ - ದ್ವಿತೀಯ ದಶಕ** ಈ ದಶಕದಲ್ಲಿ ತಾಯಿ ನಾಯಕಿಯ ದೆಶೆಯನ್ನು ವರ್ಣಿಸುತ್ತಾಳೆ ನಾಯಕಿಯನ್ನು ರಕ್ಷಿಸದೇಕೆಂದು ರಂಗನಾಥನನ್ನು ದೇಡಿಕೊಳ್ಳುವ ಪರಿಯಿದೆ

ಈ ನಾಯಕಿ ಹಗಲೂ ರಾತ್ರಿ ನಿದ್ರೆಯಿಲ್ಲದೆ ಕಣ್ಣೀರ್ಗರೆಯುತ್ತ, ನಿನ್ನ ಶಂಖ ಚಕ್ರಗಳನ್ನೇ ನೆನೆಯುತ್ತ ನಿನ್ನ ನೇತ್ರಪದ್ಮಗಳನ್ನು ಸ್ಮರಿಸುತ್ತ, ನಿನ್ನನ್ನು ಬಿಟ್ಟು ಹೇಗೆ ಇರುವುದು ಎಂದು ಹಲುಬುತ್ತಾಳೆ ನಿನ್ನನ್ನು ಹುಡುಕುವಂತೆ ಭೂಮಿಯನ್ನೆಲ್ಲ ಮುಟ್ಟಿ ನೋಡುತ್ತಾಳೆ ಎಲೈ ರಂಗನಾಥನೇ? ಇವಳನ್ನು ಯಾವ ರೀತಿ ಸಮಾಧಾನ ಪಡಿಸಲಿ "ಎಲೈ ಕಮಲ ಲೋಚನನೇ" ಎಂದು ನಿಟ್ಟುಸಿರುಗರೆಯುತ್ತಾಳೆ ಹಿಂದೆ ನಾನು ಪಾಪ ಮಾಡಿರುವುದರಿಂದಲೇ ನೀನು ದರ್ಶನ ನೀಡುತ್ತಿಲ್ಲ ಆದರೆ ಕರುಣಾಶಾಲಿಯಾದ ನೀನು ಹೀಗೆ ಪರಾಙ್ಮುಖನಾಗುವುದು ಸರಿಯೇ? ಎಲೈ ಪ್ರಪಂಚದ ಸೃಷ್ಟಿ ಲಯಗಳಿಗೆ ಕಾರಣನಾದ ಸ್ವಾಮಿಯೇ? ನೀನೇ ಪರಿಹಾರಮಾರ್ಗವನ್ನು ಕಾಣಿಸು ಆಕಾಶವನ್ನೇ ನೋಡುತ್ತ "ಎಲೈ ನೀಲ ವರ್ಣನೇ" ಎಂದು ಪ್ರಲಾಪಿಸುವಳು ರಾಕ್ಷಸಕುಲವನ್ನು ನಾಶಪಡಿಸಿದವನೇ" ಎಂದು ಶೋಕಿಸುವಳು ಅದೃಶ್ಯನಾಗಿ ನಿಂತಿರುವೆಯಲ್ಲ, ನಿನ್ನನ್ನು ಹೇಗೆ ದರ್ಶಿಸುವುದು ಹೇಳು ಎಂದು ಕೇಳುತ್ತಾಳೆ ವೈಭವದ ಪ್ರಾಕಾರದಲ್ಲಿ ನಿಂತಿರುವ ರಂಗನಾಥ, ನೀನೇ ತಿಳಿಸಬೇಕು ಅವಳಿಗೆ ಈ ಅವಸ್ಥೆಯುಂಟಾಗಲು ನೀನು ಯಾವ ಮಾಯೆಯನ್ನು ಅವಳ ಮೇಲೆ ಪ್ರಯೋಗಿಸಿರುವೆಯೋ ಯಾರಿಗೆ ಗೊತ್ತು ಕೈಕಾಲುಗಳಲ್ಲಿ ಚಲನೆಯಿಲ್ಲದಂತೆ ಒಮ್ಮೆ ನಿಂತುಬಿಡುವಳು ಮತ್ತೊಮ್ಮೆ ಮೋಹಾವೇಶದಿಂದ ಅತ್ತಿತ್ತ ಓಡಿಯಾಡುವಳು ಅಯ್ಯೋ ಆಸೆಯೇ ನಿನ್ನಿಂದ ಎಷ್ಟು ಕಷ್ಟ ಅನುಭವಿಸಬೇಕು ಎಂದು ಮೂರ್ಛೆ ಹೋಗುವಳು ಮತ್ತೊಮ್ಮೆ 'ಸಮುದ್ರದಂತೆ ಅತ್ಯಂತ ಮಹಿಮಾಯುಕ್ತನೆ, ನನ್ನ ವಿಷಯದಲ್ಲಿ ಏಕೆ ನಿಷ್ಕರುಣಿಯಾಗಿರುವೆ' - ಎಂದು ಬೇಡುವಳು ಮಗದೊಮ್ಮೆ "ಎಲೈ ಚಕ್ರಪಾಣಿಯೇ ಬಂದುಬಿಡು ಎಂದು ಒತ್ತಾಯಪೂರ್ವಕ ಮಾತನಾಡುವಳು "ಎಲೈ ರಂಗನಾಥನೇ ಇವಳನ್ನು ನೀನೇ ರಕ್ಷಿಸಬೇಕು ಸಂಧ್ಯೆಯಲ್ಲಿ ಹಿರಣ್ಯಕಶ್ಯಪನ ಉರವನ್ನು ಬಗೆದವನೆ, ಕ್ಷೀರಾಬ್ಧಿಯಿಂದ ಅಮೃತೋಪಮೆಯಾದ ಲಕ್ಷ್ಮಿಯನ್ನು ವಕ್ಷಸ್ಥಲದಲ್ಲಿ ಧರಿಸಿದವನೆ, ನನ್ನ ಪ್ರಾಣಸ್ವರೂಪನೆ, ಭೂಮಿಯನ್ನು ಪ್ರಳಯಕಾಲದಲ್ಲಿ ಉದ್ಧರಿಸಿದವನೆ, ಸಪ್ತ ವೃಷಭಗಳನ್ನು ಅಡಗಿಸಿ ನೀಳಾದೇವಿಯನ್ನು ಮದುವೆಯಾದವನೇ, ಶ್ರೀರಂಗನಾಥನೇ"- ಎಂದು ಪ್ರಲಾಪಿಸುವಳು "ಇಂದ್ರ, ರುದ್ರ, ಬ್ರಹ್ಮರೆಲ್ಲರಿಗೂ ಅಂತರಾತ್ಮನೇ, ಕಾಲ ಮೇಘ ಸದೃಶನಾದವನೇ, ನಿನ್ನ ಶ್ರೀಪಾದಗಳೇ ಭೋಗ್ಯವೆಂದು ಹಲುಬುವಳು ಅದನ್ನೇ ಈಗ ಈಕೆ ಹೊಂದಿರುವಳು ಎಂದು ತಾಯಿ ಸಮಾಧಾನ ಹೊಂದುವಳು

22 **ಸಪ್ತಮಶತಕ - ತೃತೀಯ ದಶಕ** · ಈ ದಶಕದಲ್ಲಿ ನಾಯಕಿಯು ತನಗೆ ತಿರುಪ್ಪೇರ್ಯೆ ಕ್ಷೇತ್ರದ ಸ್ವಾಮಿಯ ರೂಪದಲ್ಲಿ ನಾಯಕನ ದರ್ಶನವಾಗಿರುವುದಾಗಿಯೂ, ತನ್ನನ್ನು ಅಲ್ಲಿಗೆ ಕರೆದು ಕೊಂಡು ಹೋಗಿ ಸ್ವಾಮಿಯೊಡನೆ ಸಮಾಗಮಗೊಳಿಸದೇಕೆಂದು ತನ್ನ ತಾಯಿಯಲ್ಲಿ, ಸಖಿಯರಲ್ಲಿ ಬೇಡುತ್ತಾಳೆ

ಶುಭ್ರನಾದ ಶಂಖಚಕ್ರಾಂಕಿತನಾದ ಕಮಲನೇತ್ರನಾದ ತಿರುಪ್ಪೇರ್ಯೆಸ್ವಾಮಿ ಗರುಡಗಮನನಾಗಿರುವುದು ಕಂಡು ನನ್ನ ಹೃದಯ ತುಂಬಿ ಹರಿಯಿತು ನಾನು ಆತನನ್ನೇ ಹೋಗಿ ಸೇರಬೇಕು ವೇದಘೋಷ ಉತ್ಸವ ಸಂಭ್ರಮಗಳಿಂದ ಮೆರೆಯುವ ಆ ಜಾಗಕ್ಕೆ ನನ್ನನ್ನು ಕರೆದೊಯ್ಯಿರಿ ದಿವ್ಯ ಕೇಶಿಗಳಾದ ಸಖಿಯರೆ, ತಾಯಿಯೇ, ನೆರೆಹೊರೆಯ ಜನರೆ, ನನ್ನನ್ನು ದೂರದೇಡಿ, ನನ್ನ ಮನಸ್ಸು ನನ್ನನ್ನೂ ದಾಟಿ ಅವನನ್ನು ಸೇರಿಹೋಗಿದೆ ಹಗಲು ರಾತ್ರಿ ಭೇದವರಿಯದೆ ಆ ಪುಷ್ಪಸಸ್ಯಭರಿತವಾದ ತಿರುಪ್ಪೇರ್ಯೆ ಸ್ವಾಮಿಯಲ್ಲಿ ಲೀನವಾಗಿದೆ ನಾನೇನು ಮಾಡಲಿ ನನ್ನನ್ನು ನೀವು ತಡೆಯಲಾರಿರಿ ಆತನ ಬಿಂಬಾದರ, ಕಿರೀಟ, ಶಂಖಚಕ್ರ, ನೇತ್ರಾಂಬುಜ ಎಲ್ಲವೂ ನನ್ನನ್ನು ತಮ್ಮತ್ತ ಸೆಳೆದುಕೊಂಡಿವೆ ಆತನ ಮಾಸೋತ್ಸವ, ದೈನಂದಿನೋತ್ಸವಗಳನ್ನು ಅನುಭವಿಸಲು ಮನವು ಹಾತೊರೆಯುತ್ತಿದೆ ಇನ್ನು ಲಜ್ಜೆ ಶೀಲ ಸಂಕೋಚಗಳನ್ನು ಇಟ್ಟುಕೊಂಡು ನಾನೇನು ಮಾಡಲಿ ನನ್ನ ಶೀಲವು ನಷ್ಟವಾಯಿತೆಂದು ಕಷ್ಟದಿಂದ ಮನಸ್ಸನ್ನು ಅವನನ್ನು ಕರೆತರಲು ಅಟ್ಟಿದರೆ ಅದು ಅಲ್ಲಿಯೇ ನಿಂತುಬಿಟ್ಟಿತು ಹೀಗೆ ನನ್ನ ಮನಸ್ಸೇ ಅವನಲ್ಲಿ ಸಕ್ತವಾದರೆ ನಾನು ನನ್ನ ಸಂತಾಪವನ್ನು ಯಾರಲ್ಲಿ ಹೇಳಿಕೊಳ್ಳಲಿ ನಾನೀಗ ವೇದಘೋಷ ಭೂಷಿತನಾದ ತಿರುಪ್ಪೇರ್ಯೆ ಸ್ವಾಮಿಗೆ ಸಂಪೂರ್ಣ ಅರ್ಪಿತ ನನ್ನನ್ನು ದೂರದೇಡಿರಿ ಶಕಟ, ಪೂತನಿ, ಯಮಳಾರ್ಜುನ, ವತ್ಸಾಸುರರನ್ನು ಭಂಜಿಸಿದ ಶ್ರೀಕೃಷ್ಣನಿಗೆ ನಾನು ಸಮಸ್ತವನ್ನೂ ನೀಡಿ ಸೋತಿರುವೆನು ನನ್ನನ್ನು ತಿರುಪ್ಪೇರ್ಯೆಗೆ ಒಯ್ದು ಆ ಸ್ವಾಮಿಗೇ ಒಪ್ಪಿಸಿರಿ ಅದೇ ಪರಿಹಾರೋಪಾಯ ಸುಮ್ಮನೆ ದೂರುವುದು ತರವಲ್ಲ ಆ ನೀಲಮೇಘವರ್ಣನು ನನ್ನ ಮುಂದೆ ಕಾಣುತ್ತಿರುವ, ಆದರೆ ಕೈಗೆಟುಕುತ್ತಿಲ್ಲ ಆತನನ್ನು ಸೇರುವ ಆಸೆ ಅಪಾರ ಸಾಗರದಂತಿದೆ ಆತನ ವಾಸಸ್ಥಾನವಾದದ್ದೂ, ವೇದವಿ



ದರಿಂದ ತುಂಬಿರುವುದೂ, ಕೆಂಪು ಭತ್ತದ ಸಸ್ಯಸಮೃದ್ಧಿಯುಳ್ಳ, ತುಂಬಿದ ಜಲಪ್ರವಾಹದ ನದಿಯನ್ನುಳ್ಳ ತಿರುಪ್ಪೇರ್ಕೈಯೇ ನನಗೆ ಸ್ಪೃಹಣೀಯವಾದ ಸ್ಥಳ ನನ್ನ ಮನಸ್ಸು ಆಗಲೇ ಆ ಊರನ್ನು ತಲುಪಿಬಿಟ್ಟಿದೆ ಅವನನ್ನು ಹುಡುಕಿ ಹಿಂದಿರುಗುವ ಭರವಸೆಯಿಲ್ಲ ಎಲೈ ಸಖಿಯೇ ನನಗೆ ಯಾರು ಸಹಾಯ ಮಾಡಬಲ್ಲರು. ಆ ರೀತಿ ಹೊಂದಲು ಹೋದ ಮನವನ್ನು ಹಿಡಿದು ಹಿಂದೆ ಬರುವ ಸಾಹಸಿಗಳು ಯಾರೂ ಇಲ್ಲ ಆದ್ದರಿಂದ ಆ ಮನಸ್ಸಿನ ಹಿಂದೆಯೇ ನಾನೂ ಹೋಗುವುದಲ್ಲದೆ ಬೇರೆ ಮಾರ್ಗವೇ ಇಲ್ಲ ಎಲೈ ಸಖಿಯೇ ನಾನು ಸ್ವಾಮಿಗೆ ಸಮರ್ಪಿತೆಯಾಗಿರುವುದನ್ನು ಎಲ್ಲರೂ ದೂರಿಕೊಳ್ಳಲಿ ಆ ರೀತಿಯ ನಿಂದನೆ ನನ್ನ ಆಸೆಯನ್ನು ಇನ್ನೂ ವರ್ಧಿಸುತ್ತದೆ ನನ್ನ ಶಿಥಿಲತೆ ಇನ್ನೂ ಹೆಚ್ಚುತ್ತಿದೆ ಇದರಿಂದಾಗಿ ತಿರುಪ್ಪೇರ್ಕೈಗೆ ಹೋಗಿಯೇ ನನ್ನ ಸಂತಾಪಕ್ಕೆ ಔಷಧಿಯನ್ನು ಹೊಂದಲು ನನ್ನಲ್ಲಿ ದೃಢತೆ ಏರ್ಪಟ್ಟಿದೆ ತಿಳಿಯಿತೆ ನೀವಾರೂ ತಪ್ಪಿಸಲಾರಿರಿ ಎಲೈ ಸಖಿಯರೆ, ಜನನಿಯೇ ! ಶಿಕ್ಷಿಸಬೇಕಾಗಿಲ್ಲ ನನ್ನ ಈ ಅವಸ್ಥೆಯಲ್ಲಿ ನಿಮ್ಮ ಶಿಕ್ಷೆ ಯಾವ ಲೆಕ್ಕ, ಶ್ಯಾಮವರ್ಣನಾದ ಶ್ರೀಕೃಷ್ಣನಿರುವ ತಿರುಪ್ಪೇರ್ಕೈಗೇ ನಾನು ಹೋಗಿಬಿಡುವೆನು ಉನ್ನತ ಮಾಡಗಳಿಂದ ಕೂಡಿದ (ಊರಿನ) ಸೌಂದರ್ಯ ಮೂರುತಿ ನನ್ನ ಮನಸ್ಸನ್ನು ಅಪಹರಿಸಲು ಎಷ್ಟು ಕಾಲದಿಂದ ಕಷ್ಟಪಟ್ಟಿರುವನೋ ಅವನು ವಾಸ ಮಾಡುವ ಜಾಗಗಳನ್ನೆಲ್ಲ ಅರಸಿ ನೋಡಿ ಅವನನ್ನು ಕಂಡೇ ತೀರುವೆ ಲಜ್ಜೆಯಿಂದ ಕುಳಿತರೆ ನನಗೇ ಸಿದ್ಧಿ ಇಲ್ಲ ಅಷ್ಟೆ (ಹಾಗಾಗಿ) ಈಗ ...ೕಕು

23. ಸಪ್ತಮ ಶತಕ - ಸಪ್ತಮ ದಶಕ · ಈ ದಶಕದಲ್ಲಿ ನಾಯಕಿಯು ಭಗವಂತನ ಅವಯವ ಸೌಂದರ್ಯದಿಂದ ತನಗೆ ಆಕರ್ಷಣೆ ಆದಂತೆಯೂ, ಅದೇ ಸೌಂದರ್ಯ ಈಗ ದುಃಖಹೇತುವಾಗಿರುವುದಾಗಿ ಪರಿಣಮಿಸಿರುವುದಾಗಿಯೂ ತನ್ನ ತಾಯಿಗೂ ಸಖಿಯರಿಗೂ ಹೇಳಿಕೊಂಡು ವಿಲಪಿಸುವ ಚಿತ್ರವಿದೆ ಇದೊಂದು ಮನೋಜ್ಞ ಕಾವ್ಯಮಾರ್ಗ ಎನ್ನಬೇಕು

✳ ✳ ✳ ✳ ✳

**ಮಾತಾ ಪಿತಾ ಯುವತಯಸ್ತನಯಾ ವಿಭೂತಿ:**
**ಸರ್ವಂ ಯದೇವ ನಿಯಮೇನ ಮದನ್ವಯಾಂ**
**ಆದ್ಯಸ್ಯ ನಃ ಕುಲಪತೇರ್ವಕುಳಾಭಿರಾಮಂ**
**ಶ್ರೀಮತ್ತದಂಘ್ರಿಯುಗಳಂ ಪ್ರಣಮಾಮಿಮೂರ್ಧ್ನಾ**

✳ ✳ ✳ ✳ ✳

ಇದೇನು ನನ್ನಂತಹ ನಾರಿಯರನ್ನು ಇರಿದುಕೊಲ್ಲುವ ಮೃತ್ಯುದ್ವಂದ್ವವೋ ಅಥವಾ ಕೃಷ್ಣನ ನೇತ್ರದ್ವಂದ್ವವೋ ತಿಳಿಯಲಿಲ್ಲ ಅವು ನನಗೆ ತಾವರೆಗಳಂತೆ ತೋರುತ್ತಿವೆ ಆದರೆ ನನಗೆ ತೊಂದರೆ ನೀಡಿವೆ ಅವರಿಂದ ನನಗೆ ದುಃಖವುಂಟಾಗಿದೆ ನವನೀತಭಕ್ಷಕನಾದ ಪರಮಾತ್ಮನ ನೀಳವಾದ ನಾಸಿಕವು ನನ್ನ ಮನಸ್ಸಿನಲ್ಲಿ ದೀಪದ ಕಾಂತಿಯಂತೆ ಪ್ರಕಾಶಿಸುತ್ತಿವೆ ಆದರೆ ಅದು ನನ್ನ ಪಕ್ಕದಲ್ಲಿರುವ ಕಲ್ಪಲತಾಂಕುರವೆಂದು ಭಾವನೆಯುಂಟಾಗುತ್ತಿದೆ ನೀಲಮೇಘ ಶ್ಯಾಮನ ಅದರವು ನನ್ನ ಪಾಲಿಗೆ ಪ್ರಕಾಶಮಾನವೆನಿಸಿದರೂ ಅದು ಪಕ್ವ ಫಲವೋ ಇಲ್ಲ ನನ್ನ ಪಾಪದ ಪುಂಜವೊ ಎನ್ನುವ ದ್ವಂದ್ವಕ್ಕ ಈಡು ಮಾಡಿದೆ ಆ ಭ್ರೂಯುಗ್ಮವು ನನ್ನ ಆತ್ಮದ ಮೇಲ ಅಚ್ಚೊತ್ತಿ ಕ್ಲೇಷ ಪಡಿಸುತ್ತಿದೆ ಅದು ಸ್ತ್ರೀಯರನ್ನು ಕೊಲ್ಲಲು ಏರ್ಪಟ್ಟ ಚಾಪದ್ವಂದ್ವವೋ ಅಥವಾ ಮನ್ಮಥನ ಇಕ್ಷುಚಾಪಗಳೋ ಎಂಬ ಸಂದೇಹ ನನ್ನ ಮನಕ್ಕೆ ಉಂಟಾಗಿದ ಗೋವರ್ಧನವನ್ನು ಉದ್ಧಾರ ಮಾಡಿದ ಶ್ರೀಕೃಷ್ಣನ ಸುಂದರ ಮಂದಹಾಸವು ನನ್ನ ಆತ್ಮವನ್ನೇ ದಹಿಸುತ್ತಿದೆ ಅದೇನು ಶಾಶ್ವತವಾಗಿ ಪ್ರಕಾಶಿಸುತ್ತಿರುವ ಮಿಂಚೋ ಅಥವಾ ನನ್ನ ಪ್ರಾಣವನ್ನು ಸುಡುವ ಅಲಂಕಾರದಂತೆ ತೋರಿಬರುವ ಮುತ್ತುಗಳೋ ಗೊತ್ತಾಗದು

ಕುಂಡಲಗಳಿಂದ ಕೂಡಿದ ಸ್ವಾಮಿಯ ಕಿವಿಗಳು ನನ್ನ ಸಂತಾಪವನ್ನು ಹೆಚ್ಚಿಸುತ್ತಿವೆ ಅವು ನಾರೀ ಜನರಿಗೂ ಅಸುರರಿಗೂ ನಿವಾಸವೆಂಬಂತಹ ಮೊಸಳ ರೂಪವನ್ನು ಹೊತ್ತಿರುವ ಎಳೆಯ ಚಿಗುರುಗಳೋ ಎಂಬ ಸಂದೇಹ ಏರ್ಪಡುತ್ತದೆ ಆ ಸ್ವಾಮಿಯ ಸುಂದರ ಲಲಾಟವು ನನ್ನ ಆತ್ಮವನ್ನು ಶೋಷಿಸುತ್ತಿದ ಅದೇನು ಶುದ್ಧವಾದ ಕಳಂಕ ರಹಿತವಾದ ಚಂದ್ರ ಬಿಂಬವೊ ಅಥವಾ ಸುಂದರವಾದ ವಿಕಸಿತ ಪತ್ರವೂ ಗೂತ್ತಾಗದು ಪ್ರಕಾಶವೇ ಆಭರಣವಾಯಿತೋ ಎನ್ನುವಂತೆ ತೋರುವ ಕಮಲ, ಲತೆ, ಹವಳ, ಮುತ್ತು, ತಳಿರು, ಚಂದ್ರ - ಇವುಗಳನ್ನೆಲ್ಲ ಹೊಂದಿ ಥಳ ಥಳಿಸುವ ಜ್ಯೋತಿ ಬಿಂಬದಂತಿರುವ ಶ್ರೀಕೃಷ್ಣನ ಮುಖವು ನನ್ನ ಪ್ರಾಣವನ್ನು ಅಪಹರಿಸುವ ವಸ್ತುವಾಗಿ ಪರಿಣಮಿಸಿದೆಯಲ್ಲ ಅಂಧಕಾರವನ್ನು ಜರಿಯುವಂತಹ ನೀಲವರ್ಣದ ನೂಲಿನ ಉಂಡೆಯಂತೆ ಇರುವ ಕೃಷ್ಣನ ಕೇಶದಿಂದ ಹೊರಹೊಮ್ಮಿದ ತುಳಸೀಪರಿಮಳವು ನನ್ನನ್ನು ಮತ್ತೂ ಶಿಥಿಲಗೊಳಿಸುತ್ತಿದ ಈ ಅವಸ್ಥೆಯು ನಿಮಗೆ ಅರ್ಥವಾಗಲಾರದು ಸಖಿಯರೇ ! ನನ್ನನ್ನು ಅಂಗಳದಲ್ಲಿ ನಿಂತವಳೆಂದು ಬಯ್ದಿರಲ್ಲವೆ ! ನಾನೇನು ಮಾಡಲಿ ನನ್ನ ಮನವಲ್ಲ ಆ ದಿವ್ಯಮಂಗಳ ವಿಗ್ರಹನ ಕಾಂತಿಯುಕ್ತವಾದ ಕಿರೀಟದಲ್ಲೇ ಲೀನಗೊಂಡಿದೆ ನೀವು ದೂರುವುದನ್ನು ನೋಡಿದರೆ ನಿಮ್ಮ ಪ್ರೀತಿಯು ಫಲ ರಹಿತವೆಂದು ತೋರುತ್ತದೆ

ಅಂತಹ ಸ್ವಾಮಿಯ ದಿವ್ಯಸೌಂದರ್ಯಕ್ಕೆ ಎಲ್ಲರೂ ಮರುಳಾಗಿರುವಾಗ ನಾನು ಮರುಳಾಗಿರುವುದು ಅತ್ಯಂತ ಸಹಜವೇ ಹೀಗಿರುವಾಗ ನನ್ನನ್ನೇಕೆ ದೂರಬೇಕು ಎಂದು ಸಖಿಯರನ್ನು ತಾಯಿಯನ್ನು ಪ್ರಶ್ನಿಸುತ್ತಿರುವುದು ಅತ್ಯಂತ ಸಹಜವಾಗಿದೆ

24. ಅಷ್ಟಮಶತಕ - ದ್ವಿತೀಯ ದಶಕ : ಈ ದಶಕದಲ್ಲಿ ನಾಯಕಿಯು ಮತ್ತೆ ತನ್ನ ನೈರಾಶ್ಯವನ್ನು ವ್ಯಕ್ತ ಪಡಿಸುವ ಭಾವವಿದೆ

ಎಲೈ ಸಖಿಯರೆ! ನನಗೆ ಶತ್ರುಸದೃಶರಾದ ಈ ಜನರ ಮುಂದೆ ಹೇಳಲು ಲಜ್ಜೆ ಆಗುವುದರಿಂದ ನಿಮಗೆ ಮಾತ್ರ ಗುಟ್ಟಾಗಿ ಹೇಳುತ್ತಿದ್ದೇನೆ ಆ ಗರುಡಗಮನ ಶ್ರೀನಿವಾಸನನ್ನು ಆಶಿಸಿ ಪ್ರಾರ್ಥಿಸಲು ಹೋಗಿ ನನ್ನ ಕೈಬಳೆಗಳೆಲ್ಲ ಕಳಚಿಬಿದ್ದವು ನಾನು ಶಿಥಿಲವಾಗಿದ್ದೇನೆ ದೇಹಕಾಂತಿಯು ಹೋಯಿತು ದೇಹದ ಗಾತ್ರ ಸೊರಗಿ ಹೋಗಿದೆ ಸಖಿ, ನಿನಗೆ ಗುಟ್ಟಾಗಿ ಹೇಳುತ್ತಿದ್ದೇನೆ, ನಿನಗೆ ಹೇಳಲು ಅವಕಾಶವೇ ಸಿಗುತ್ತಿಲ್ಲ ಪುಂಡರೀಕಾಕ್ಷನಾದ ಆತನನ್ನು ಕಂಡು ನನ್ನ ಕೈಬಳೆಗಳನ್ನೂ, ನನ್ನ ಸ್ತ್ರೀತ್ವವನ್ನೂ ಮತ್ತೆ ಹೊಂದಬೇಕೆಂದು ತಹತಹಿಸುತ್ತಿದ್ದೇನೆ ಇದಕ್ಕಾಗಿ ಬಹಳ ಕಾಲದಿಂದ ಕೊರಗುತ್ತಿದ್ದೇನೆ ಸಖೀ ಜನರೆ, ಈ ದೇಹಕಾಂತಿ ಕೈಬಳೆಗಳನ್ನು ಕಳೆದುಕೊಂಡು ಅವುಗಳನ್ನು ಪುನಃ ಗಳಿಸಲಿಕ್ಕೆಂದು ಆಸೆಯಿಂದ ನಿಂದೆಯು ಭಾರವಾದರೂ ಅದನ್ನು ಸಹಿಸುತ್ತಿದ್ದೇನೆ ಎಲೈ ಸಖಿಯರೆ! ಕಾಲವು ಲಯಗೊಳ್ಳುತ್ತಿದೆ ಆದರೆ ನಾನು ಲಯಿಸುತ್ತಿಲ್ಲ, ಅಲ್ಲವೇ! ಕಾಲವೇ ನನಗಿಂತ ಹೆಚ್ಚು ಎನ್ನಬೇಕು ಏಕೆಂದರೆ ಅದು ಲಯಿಸುವುದು ಬೇಗ ನನಗೆ ಆ ಗುಣವೂ ಇಲ್ಲವಲ್ಲ

ಇಲ್ಲಿನ ಸ್ವಾರಸ್ಯವೆಂದರೆ ಎಷ್ಟು ಬೇಗ ಲಯಿಸಿದರೆ ಅಷ್ಟು ವಿರಹ ಹೆಚ್ಚೆಂಬುದು ವ್ಯಾಖ್ಯಾನ ಅದಕ್ಕಿರುವ ಆ ವಿರಹದ ಆವೇಗ ತನಗಿಲ್ಲವೆಂಬುದು ಅರ್ಥ - ಎಂದರೆ ಪರಮಾತ್ಮನಲ್ಲಿ ವಿಶ್ಲೇಷೆಯ ಭಾವ ತನಗೆ ಅಷ್ಟು ಹೆಚ್ಚಿಲ್ಲವೆಂಬ ಭ್ರಾಂತಿಯನ್ನು ಆ ಕಾಲ ತೋರಿಸಿಕೊಡುತ್ತಿದೆ ಎಂಬ ಸ್ವಾರಸ್ಯವನ್ನು ನಾವಿಲ್ಲಿ ನೋಡಬಹುದು

ಉನ್ನತವಾದ ಆಲಯದಲ್ಲಿ ನೆಲೆಗೊಂಡಿರುವ ಕುಂಭಕೋಣದ ಸಾರಂಗಪಾಣಿಯನ್ನು ನನ್ನ ಮನಸ್ಸಿನಲ್ಲಿ ನಿಲ್ಲಿಸಿ ಅವನಿಂದ ಈ ಶೈಥಿಲ್ಯಕ್ಕೆ ಒಳಗಾ

ದೇನು ಹೀಗೆ ಸರ್ವಸ್ವವನ್ನೂ ಅರ್ಪಿಸಿದ ಬಳಿಕ ನನ್ನಲ್ಲಿ ಉಳಿದಿರುವುದಾದರೂ ಏನಿದೆ

ಎಂದರೆ ಸ್ವಾಮಿಗೆ ಅರ್ಪಿಸಬೇಕಾದರೂ ಇನ್ನು ಏನೂ ಉಳಿದಿಲ್ಲ ಎನ್ನುವ ಭಾವ - ತಾನು ಅಷ್ಟು ಅನರ್ಹಳಾದೆ ಎಂಬ ಅರ್ಥ ಲಕ್ಷ್ಮಿಯ ಮುಂದೆ ಭಕ್ತನು ನಿಂತು ಆಕೆಯನ್ನು ಬೇಡಿದಾಗ ಆಕೆಯು 'ಅಯ್ಯೋ ನನ್ನಲ್ಲಿದ್ದ ಸರ್ವಸ್ವವನ್ನೂ ತನ್ನ ಭಕ್ತನಿಗೆ ನೀಡಿದ್ದಾಯಿತು ಇನ್ನು ಈ ಶರಣ್ಯನಿಗೆ ನೀಡಲು ಏನೂ ಇಲ್ಲವಲ್ಲ' ಎಂದು ತಲೆ ತಗ್ಗಿಸುತ್ತಾಳಂತೆ (ಭಟ್ಟರ್ ಅವರು ತಮ್ಮ ಶ್ರೀಗುಣರತ್ನಕೋಶದಲ್ಲಿ ವಿವರಿಸುತ್ತಾರೆ ) ಎಂದರೆ ಔದಾರ್ಯದ ಪರಮಾತ್ಮ ಮೆರೆದಿರುವ ಲಕ್ಷಣ ಇದು ಈಗ ಅದೇ ಭಾವ ವನ್ನು ನಾಯಕಿಯ ರೂಪದಲ್ಲಿ ಇಲ್ಲಿ ಆಳ್ವಾರರು ಚಿತ್ತರಿಸಿದ್ದಾರೆ ಇಲ್ಲಿ ನಾವು ಅರ್ಥ ಮಾಡಬೇಕಾ ದುದು ಕೇವಲ ಕಾಮಭಾವನೆ ಮಾತ್ರವಲ್ಲ ವಿಶಾ ಲಾರ್ಥದಲ್ಲಿ ನಾವು ಈ ಸಾಲುಗಳನ್ನು ಅವಗಾಹ ನೆಗೆ ತೆಗೆದುಕೊಳ್ಳಬೇಕು ಆದರೆ ದೈವಭಕ್ತ ಪರ ಮಾತ್ಮ - ಜೀವಾತ್ಮ - ಈ ಭಾವದಿಂದ ನಾವು ಅವ ಲೋಕಿಸಿದರೆ ಭಗವಂತನ ಆಕಿಂಚನ್ಯವೂ ಭಕ್ತನ ಆಕಿಂಚನ್ಯವೂ ಅರ್ಥಪೂರ್ಣವಾಗಿ ಧ್ವನಿಸುತ್ತದೆ ಇವೆಲ್ಲ ಭಕ್ತಿಯ ಪರಾಕಾಷ್ಠೆಯ ಭಾವಗಳು ನನ್ನದು ಎಂಬುದು ಯಾವುದೂ ಇಲ್ಲ ಅವೆಲ್ಲವನ್ನೂ - ಆ ವ್ಯಾಮೋಹವನ್ನೂ ತ್ಯಜಿಸಿ ನೀನೇ ಗತಿಯೆಂದು ಬಂದಿದ್ದೇನೆ ಎನ್ನುವುದೇ ನಮಸ್ಕಾರದ ಅರ್ಥ ಇದೇ ಸಂಪೂರ್ಣ ಶರಣಾಗತಿ ಅಂತಹ ಮಮಕಾರ ವಿಲ್ಲದಿದ್ದರೇನೇ ಮನುಷ್ಯ ಮಹಾತ್ಮನಾಗಿ ನಿಲ್ಲ ಬಲ್ಲ ಆಂಜನೇಯನು ಸೀತಾದರ್ಶನದ ವಾರ್ತೆ ಯನ್ನು ತಂದಿದ್ದನ್ನು ಕೇಳಿದ ರಾಮನು 'ಅಯ್ಯೋ ಈ ಅತ್ಯಂತ ಸಂತಸದ ಸಮಾಚಾರವನ್ನು ತಂದ ನಿನಗೆ ಬಹುಮಾನವಾಗಿ ಕೊಡಲು ನನ್ನ ಬಳಿ ಏನೂ ಇಲ್ಲವಲ್ಲ ನನ್ನಿಂದ ಕೃತಜ್ಞತೆ ಎನ್ನುವುದು ಒಂದೇ ಸಾಧ್ಯ' ಎನ್ನುತ್ತ ಆಂಜನೇಯನನ್ನು ಆಲಂಗಿಸಿಕೊಂ ಡನಂತೆ ಇದೇ ಸರ್ವಸ್ವ ದಾನ ಸದೃಶಂ ಎಂದು ವಾಲ್ಮೀಕಿ ಬಣ್ಣಿಸಿದ್ದಾರೆ ಆಂಜನೇಯನಿಗೆ ಅದೇ ಪರಮಕೃಪೆ, ಪರಮ ಭಾಗ್ಯವಾಯಿತಂತೆ ಭಗ ವಂತನ ಆಲಿಂಗನವೆನ್ನುವ ಅನುಗ್ರಹ ಎಲ್ಲರಿಗೂ ಸುಮ್ಮನೆ ದೊರೆಯುವುದಿಲ್ಲ ಎಷ್ಟೋ ಜನ್ಮದ ಪುಣ್ಯ ವಿರಬೇಕು ಅದಕ್ಕೆ. ಆಂಜನೇಯ ಈ ಅನುಗ್ರಹ ವಿಶೇಷಕ್ಕೆ ಒಳಗಾದ ಈ ರೀತಿ ಭಕ್ತನು ಪರಮಾ ತ್ಮನಿಗೆ ಸಮರ್ಪಿಸಲು ತನ್ನಲ್ಲಿ ಏನೂ ಇಲ್ಲ ಎಂದು ಪರಿತಪಿಸುವುದು, ಪರಮಾತ್ಮನು ಭಕ್ತನಿಗೆ ನೀಡಲು ತನ್ನಲ್ಲಿ ಏನೂ ಉಳಿದಿಲ್ಲ ಎಂದು ಕೊರಗುವುದೂ ಇಬ್ಬರ ಪ್ರೇಮಾತಿಶಯದ, ಉಭಯ ಕ್ಷೇಮಚಿಂ ತನದ ಪರಮಾವಧಿಯಲ್ಲದೆ ಸಾಮಾನ್ಯ ವಿಷಯ ವೇನಲ್ಲ ಆಪ್ತತೆ, ಗಾಢತೆಗಳ ಮಹದ್ಭಾವ ಇದು ಪರಸ್ಪರ ಅಭಿಮಾನ ಅತ್ಯಂತ ಹೆಚ್ಚಾದಾಗ ಉಂಟಾ ಗುವ ಆಕಿಂಚನ್ಯತೆ ಅವನ ಕಾಂತಿ ಸೌಂದರ್ಯಗಳು ಮಾತಿಗೆ ಸಿಗಲಾರದವುಗಳಾಗಿದ್ದು ಬ್ರಹ್ಮಾದಿ ದೇವ ತೆಗಳಿಗೂ ಆತನ ಪರತ್ವ ಮಹಿಮೆ ಅಗೋಚರವಾ ಗಿದ್ದು, ಅನೇಕ ಜಿಜ್ಞಾಸೆಗಳಿಗೆ ಎಡೆ ಮಾಡಿವೆ.

ಅಪರಿಮಿತ ಮಹಿಮಾಸಂಪನ್ನನೂ, ಆಶ್ರಿತವತ್ಸ ಲನೂ ಆಗಿದ್ದು ನನ್ನ ಮನಸ್ಸನ್ನೂ ದೇಹಕಾಂತಿ ಯನ್ನೂ ಅಪಹರಿಸಿ, ನನ್ನನೇಕೆ ಕಾಡಬೇಕು ತಿರು ಕ್ಕುಡಂದೆಯಲ್ಲಿನ (ಕುಂಭಕೋಣ) ಸ್ವಾಮಿಗೆ ನನಗೆ ತುಳಸೀ ಮಾಲೆಯನ್ನು ನೀಡಲಾಗದಿರುವಷ್ಟು ಅಸ ಮಾಧಾನವೇಕಾಗಿದೆ ಆತನೇ ಹೀಗಾದರೆ ಇನ್ನಾ ರಿಗೆ ಮೊರೆಯಿಡಬೇಕು. ಯಾರನ್ನು ರಕ್ಷಕರೆಂದು ಭಾವಿಸಬೇಕು ಇದು ಆತನ ಸೌಲಭ್ಯಗುಣಕ್ಕೆ ಅಪ ವಾದವಲ್ಲವೇನು ? ಸರ್ವಸುಲಭನೆಂದು ಹೇಳಿಕೊ ಳ್ಳುವ ಆತ, ಪಾಪ ಮಾಡಿದವರನ್ನೂ ದಯೆಯಿಂದ ಕಟಾಕ್ಷಿಸುವವನು ಎನ್ನಿಸಿಕೊಂಡ ಆತ, ಕೇಶವ, ನಾರಾಯಣ, ಗೋವಿಂದ, ಮಾಧವ ಎಂದು ನಾವು ಆರ್ತರಾಗಿ ಕರೆಯುವಂತೆ ಮಾಡಿ, ಹಾಗೆ ಒರಲಿ ದರೂ ದೊರೆಯದೆ, ಒಮ್ಮೆಯಾದರೂ ದರ್ಶನ ಭಾಗ್ಯ ನೀಡದೆ, ಏಕೆ ಮರೆಯಬೇಕು ಅವನಿಗೆ ನಮ್ಮ ಆಣೆ ಅವನು ಬಂದೇ ತೀರಬೇಕು ಕಟಾಕ್ಷಿಸಿಯೇ ತೀರಬೇಕು ನಮಗೂ ನಿಮಗೂ ಯಾವ ಸಂಬಂ ಧವೂ ಇಲ್ಲ ಸಂಬಂಧವೆಂಬ ಬಂಧುತ್ವವು ಇದ್ದಲ್ಲಿ ಅದು ಅವನಲ್ಲಿ ಮಾತ್ರ. ಎಲೈ ಗಿಣಿಗಳೇ! ಪೂವೈ ಗಳೇ! ಕೋಗಿಲೆಗಳೇ! ನಾನು ನಿಮಗೆ ತೊಂದರೆ ನೀಡುವುದಿಲ್ಲ ಆತ ನನ್ನನ್ನು ನಿಸ್ತೇಜಳನ್ನಾಗಿ ಮಾಡಿ, ಕೈಬಳೆಗಳನ್ನು ಕಸಿದಿದ್ದಾನೆ ನಾನಿನ್ನು ಅವನನ್ನು ಪರಮಪದ, ಕ್ಷೀರಾಬ್ಧಿ, ಭೂವೈಕುಂಠ ಎನಿಸುವ ತಿರುಪತಿಗಳಲ್ಲಿ ಕಾಣಬಲ್ಲೆ. ಅವನನ್ನು ಕಾಣಲು ಯಾರದೂ ಅಡ್ಡಿಯಿಲ್ಲ ನಮಗೆ ಬೇರೆ ಪಾಶಗಳು ಆವರಿಸಿರಬೇಕೇನೋ, ಅದಕ್ಕೇ ಅವನು ರಕ್ಷಣೆಗೆ ಬಂದಿಲ್ಲ ಈಗ ನಮ್ಮ ನಿಮ್ಮ ಸಂಬಂಧಗಳೂ ಒಂದು ರೀತಿಯ ಪಾಶ, ಬಾಂಧವ್ಯ, ವ್ಯಾಮೋಹ - ಅವನ್ನು ವಿಸರ್ಜಿಸುತ್ತೇನೆ ಆಗ ಆತನು ಲಭಿಸು ತ್ತಾನೆ. ತನ್ನ ಆಸ್ಥಾನಗಳ ಭೋಗಗಳನ್ನು ದೊರಕಿಸಿ ಕೊಡುತ್ತಾನೆ ಆ ನಂಬಿಕೆ ನನಗುಂಟು ನನ್ನ ಮನ ಸ್ಸಾದರೂ ಆಗಲೀ ನನಗೆ ಸಹಕಾರ ನೀಡಲಾರೆ ನೆಂದು ಮುನಿಸಿಕೊಂಡು ಹೊರಟುಹೋಗಿ ಆತನ ಪಾದ ಪದ್ಮಗಳಲ್ಲಿ ಆಶ್ರಯ ಪಡೆದಾಯಿತು ನಾನು ಇನ್ನೇನು ಮಾಡಬೇಕು ನೀವೇ ಹೇಳಿರಿ

**25. ಅಷ್ಟಮ ಶತಕ-ನವಮ ದಶಕ :** ಸಖಿ ಯರು ನಾಯಕಿಯು ತಿರುಪ್ಪುಳಿಯೂರು ಕ್ಷೇತ್ರದ ಸ್ವಾಮಿಯಲ್ಲಿ ಆಕರ್ಷಿತಳಾಗಿರುವುದನ್ನು ನಾಯ ಕಿಯ ತಾಯಿಯಲ್ಲಿ ನಿರೂಪಿಸುತ್ತಾರೆ

ನೀಲಮಾಣಿಕ್ಯಪರ್ವತದ ಮೇಲಿನ ರಮ್ಯ ತಾವ ರೆಯಂತೆ ಲಕ್ಷ್ಮೀ ಕೌಸ್ತುಭ ಸುಶೋಭಿತ ವಕ್ಷಃ ಸ್ಥಳನೂ ಅಭಯ ನೇತ್ರ ಹಸ್ತನೂ ನಾಭಿಪಾದ ವಸ್ತ್ರಾದಿ ಸೌಂದರ್ಯ ಸಹಿತನೂ ಕೆಂಪು ವರ್ಣಕಾಂ ತಿಯಿಂದ ಕೂಡಿದ ಆ ತಿರುಪ್ಪುಳಿಯೂರು ದೈವದ ಮಾತೇ ಆಕೆಯ ನಾಲಿಗೆಯ ಮೇಲೆ ನಿಂತಿರು ವುದು ಬೇರೆ ವಿಷಯವೇ ಕಾಣಿಸದು ರಮ್ಯವಾದ ಮೇರುಪರ್ವತದ ಮೇಲೆ ಸೂರ್ಯನೂ ಗ್ರಹಾದಿ ಗಳು ಶೋಭಿಸುವಂತೆ ಕನಕ ರತ್ನಮಯದ್ಯುತಿಯ ಕಿರೀಟ, ಹಾರ, ನೂಪುರ ಆದ್ಯಾಭರಣ ರಂಜಿತನಾ ದವನೂ, ಉದ್ಯಾನ ಪರಿವೃತವಾದ ತಿರುಪ್ಪುಳಿಯೂ ರಿನ ಸ್ವಾಮಿಯೇ ಆಕೆಯ ಸಂಕೀರ್ತನಾವಸ್ತು ಬೇರೆ ಯಾವುದೂ ಬೇಕಾಗಿಯೇ ಇಲ್ಲ ಘೋಷದಿಂದ ಕೂಡಿದ ಸಮುದ್ರವು ಅಗ್ನಿಕಾಂತಿಯೊಡನೆ ನಡೆದು ಬರುವಂತೆ ಚಕ್ರಾಯುಧದಿಂದ ಮೆರೆಯುವ ಅಸು ರಧ್ವಂಸಿ ತಿರುಪ್ಪುಳಿಯೂರು ಸ್ವಾಮಿಯ ಸೌಂದ ರ್ಯವೇ ಆಕೆಗೆ ಸ್ತೋತ್ರವಿಷಯವಾಗಿ ಬಿಟ್ಟಿದೆ ಉನ್ನತ ಉದ್ಯಾನ, ಕೆಂಪುಭತ್ತದ ಗದ್ದೆಗಳು - ಇವೇ ತುಂಬಿ ಸಮೃದ್ಧವಾದ ತಿರುಪ್ಪುಳಿಯೂರು ಸ್ವಾಮಿಯ ದಿವ್ಯನಾಮಸ್ಮರಣೆಯೇ ಅಹೋರಾತ್ರಿ ಆಕೆಗೆ ಚೈತನ್ಯವೀಯುವ ವಿಷಯವಾಗಿದೆ ಆಕೆಯ ಅಲಂಕಾರಾದಿಗಳು ಲೋಕ ಮರ್ಯಾದೆಗೆ ಅಪ ವಾದವಾಗಿದೆ ಏಕೆಂದರೆ ಆಕೆ ತಿರುಪ್ಪುಳಿಯೂರು ಸ್ವಾಮಿಯಲ್ಲಿ ಮಗ್ನಳಾಗಿರುವುದರಿಂದ ಅವುಗಳನ್ನು ಅಲಕ್ಷ್ಯ ಮಾಡಿದ್ದಾಳೆ ಆತನ ಸಂಶ್ಲೇಷೆಯ ಸೌಖ್ಯದ ಚಿಹ್ನೆಗಳು ಆಕೆಯ ಮೈಮೇಲೆ ಪ್ರಕಾಶಿಸುತ್ತಿವೆ ಉದಾಹರಣೆಗೆ ಆಕೆಯ ಪಕ್ವಬಿಂಬೋಷ್ಠವೇ ಸಾಲ ದೇನು? ತಾಂಬೂಲವಲ್ಲಿಗಳಿಂದಲೂ ಕ್ರಮುಕ ಉದ್ಯಾನಗಳಿಂದಲೂ ಬಾಳೆಯ ಫಲಗಳಿಂದಲೂ ಆವೃತವಾದದ್ದೂ, ತೆಂಗಿನ ತೋಟಗಳಿಂದ ಒಡ ಗೊಂಡ ತಿರುಪ್ಪುಳಿಯೂರು ಸ್ವಾಮಿಯಲ್ಲಿ ಸಂಶ್ಲೇಷ ಭಾಗ್ಯವನ್ನು ಹೊಂದಿರುವ ಸೌಖ್ಯ ಆಕೆಯಲ್ಲಿ ಕಂಡು ಬರುತ್ತಿದೆ ಆಕೆ ಯಾಗಧೂಮದಿಂದ ಪೂತವಾದ ತಿರುಪ್ಪುಳಿಯೂರು ಹೆಸರಿನಲ್ಲಿ ಅಲ್ಲದೆ ಬೇರೆ ಯಾವು ದರಲ್ಲಿಯೂ ಲಕ್ಷ್ಯವನ್ನೇ ನೀಡುತ್ತಿಲ್ಲ. ವೇದಘೋಷ ಪಾರಗರಾದ ಬ್ರಾಹ್ಮಣರಿಂದ ತುಂಬಿದ ತಿರುಪ್ಪು ಳಿಯೂರಿನ ಸ್ವಾಮಿಯ ವೈಭವವನ್ನೇ ಮನಸಾರ ಅನುಭವಿಸುತ್ತಿರುವ ಆಕೆಗೆ ಬೇರೆ ಯಾವ ವ್ಯವಹಾ ರವೂ ವರ್ಜ್ಯವೇ ಆಗಿಬಿಟ್ಟಿದೆ

(ಮುಂದುವರೆಯುವುದು.)

# ರಾಶಿಫಲ - 1999

- ಪರಾಶರಂ ಬಾಲಸುಬ್ರಹ್ಮಣ್ಯಂ.

**ಮೇಷ :** (ಅಶ್ವಿನಿ - ಭರಣಿ, ಕೃತ್ತಿಕೆ - 1) ಗುರುವಿನ ಹನ್ನೆರಡನೆಯ ಮನೆಯ ಸಂಚಾರದಿಂದಾಗಿ ಮನೆಯಲ್ಲಿ ಅನ್ಯೋನ್ಯತೆ ಕಡಿಮೆಯಾಗುವುದು ಪತ್ನಿಯ ಕಡೆಯ ಬಂಧುಗಳಿಂದಾಗಿ ವೈದ್ಯಕೀಯ ವೆಚ್ಚಗಳು ಹೆಚ್ಚಾಗುತ್ತವೆ ಬರಬೇಕಾದದ್ದನ್ನು ವಸೂಲಿ ಮಾಡುವಲ್ಲಿ ಶ್ರಮವುಂಟಾಗುವುದು ವಿದೇಶಯಾತ್ರೆಗಳಿಗಾಗಿ ಅಗತ್ಯವಾಗುವ ಪಾಸ್‌ಪೋರ್ಟ್ ವೀಸಾಗಳನ್ನು ಪಡೆಯುವಲ್ಲಿ ಅಧಿಕ ಶ್ರಮವಾಗುತ್ತದೆ ಜನ್ಮಶನಿ ಬಾಧೆಗಳು ಈ ವರ್ಷವೆಲ್ಲ ಇರುತ್ತವೆ ಕುಟುಂಬದಲ್ಲಿ ಒಬ್ಬರ ವಿಯೋಗದಿಂದ ದುಃಖವುಂಟಾಗುತ್ತದೆ ಆರ್ಥಿಕ ಮುಗ್ಗಟ್ಟು ಹೆಚ್ಚುತ್ತದೆ ಈ ರಾಶಿಯ ಒಡೆಯನಾದ ಕುಜನ ಮೇಲೆ ಶನಿಯ ಅಶುಭ ದೃಷ್ಟಿಯಿಂದಾಗಿ ಆರೋಗ್ಯಲೋಪ, ಧನಲೋಪಗಳುಂಟಾಗುವವು. ನಾಲ್ಕನೆಯ ಮನೆಯಲ್ಲಿ ರಾಹುವೂ ಹತ್ತನೆಯ ಮನೆಯಲ್ಲಿ ಕೇತುವೂ ಈ ವರ್ಷವೆಲ್ಲ ಸಂಚರಿಸುತ್ತಾರೆ ಈ ಸಂಚಾರದಿಂದಾಗಿ ಅತೃಪ್ತಿಯುಂಟಾಗುವುದು ವೃತ್ತಿ ಉದ್ಯೋಗಗಳಲ್ಲಿ ಮನಃಶಾಂತಿಯಿರುವುದಿಲ್ಲ ವ್ಯಾಪಾರದಲ್ಲಿ ಸಹಚರರು ಮಿತ್ರರು ಮೋಸಮಾಡುವರು ಎಚ್ಚರಿಕೆಯಿಂದಿರಬೇಕು ಪ್ರಯಾಣದಲ್ಲಿ ಹಲವು ರೀತಿಯ ಶ್ರಮ ವಿದ್ಯಾರ್ಥಿಗಳ ಹೆಚ್ಚಿನ ಶಿಕ್ಷಣದಲ್ಲಿ ಅಧಿಕವಾದ ಅಡ್ಡಿಗಳುಂಟಾಗುವವು. ಮೇ ಕಡೆಯವಾರದಲ್ಲಿ ಗುರುವು ಮೇಷರಾಶಿಯಲ್ಲಿ ಸಂಚರಿಸುವನು ಇದರಿಂದಾಗಿ ಪೂರ್ವಿಕರ ಆಸ್ತಿಪಾಸ್ತಿಗಳು ಬರುವ ಸೂಚನೆಗಳಿವೆ ಮನೆ, ಭೂಮಿ, ಕೊಳ್ಳಲು ಸಮಯ ಕೂಡಿಬರುತ್ತದೆ ಕುಟುಂಬದಲ್ಲಿ ಶುಭಕಾರ್ಯಗಳ ಸೂಚನೆಗಳಿವೆ ವಿವಾಹಾದಿ ಶುಭಕಾರ್ಯಗಳುನಡೆಯುತ್ತವೆ ಪುಣ್ಯಕ್ಷೇತ್ರಯಾತ್ರೆಗಳನ್ನುನಡೆಸುವಿರಿ ಷೇರುಗಳಲ್ಲಿ ತೊಡಗಿಸಿದ ಮೂಲಧನ ಒಳ್ಳೆಯ ಲಾಭಗಳನ್ನು ತಂದುಕೊಡುತ್ತವೆ ವ್ಯಾಪಾರದಲ್ಲಿ ಅಭಿವೃದ್ಧಿಯುಂಟಾಗುವುದು ಮಕ್ಕಳಿಲ್ಲದವರಿಗೆ ಪುತ್ರಭಾಗ್ಯವುಂಟು ಹೊಸ ಪ್ರಯತ್ನಗಳಿಂದಾಗಿ ಧನಾದಾಯ, ಸಂತೋಷಗಳುಂಟಾಗುವವು.

**ವೃಷಭ** (ಕೃತ್ತಿಕೆ - 2,3,4, ರೋಹಿಣಿ, ಮೃಗಶಿರ - 1,2) ಶನಿಯು ಹನ್ನೆರಡನೆಯ ಮನೆಯಲ್ಲಿ ಸಂಚರಿಸುತ್ತಾನೆ ಹಾಗಾಗಿ ಮೇಲ್ಮೆ ಉಂಟಾಗದು ಏಳು ವರ್ಷದ ಶನಿ ಹಿಂದಿನ ವರ್ಷ ಆರಂಭವಾಗಿದೆ ಗಂಡ ಹೆಂಡರ ನಡುವೆ ಅನ್ಯೋನ್ಯತೆಯಿರದು ಹಣದ ಮುಗ್ಗಟ್ಟು ಉಂಟಾಗುತ್ತದೆ ವಿಷ ಜಂತುಗಳು, ಪ್ರಾಣಿಗಳಿಂದಾಗಿ ಬಾಧೆಗಳುಂಟಾಗುವವು. ಕೇತುವಿನಿಂದಲೂ ಲಾಭವಿರದು ಮನೆಯ ಒಳಗೆ, ಹೊರಗೆ ಸಹ ಮನಃಶಾಂತಿ ಲೋಪವಾಗುವುದು ವೃತ್ತಿ ಉದ್ಯೋಗಗಳಲ್ಲಿ ಬದಲಾವಣೆ ಉಂಟಾಗುತ್ತದೆ ಆದರೂ ಸಹ ಒಂಭತ್ತನೆಯ ಮನೆಯಲ್ಲಿ ಸಂಚರಿಸುವ ಕೇತುವು ಗುರುಗಳ ಮಹನೀಯರ ದರ್ಶನವನ್ನು ಏರ್ಪಡಿಸಿ, ಆಧ್ಯಾತ್ಮಿಕವಾಗಿ ಏಳ್ಗೆಯನ್ನುಂಟುಮಾಡುವನು ಗುರುವು ಸ್ವಲ್ಪ ಕಡಮೆ ಅವಧಿಯಲ್ಲಿ ಈ ರಾಶಿಯವರಿಗೆ ಹನ್ನೊಂದನೆಯ ಮನೆಯಲ್ಲಿ ಸಂಚರಿಸುವನು ಆ ಸಮಯದಲ್ಲಿ ಧನ ಲಾಭವುಂಟು ಸಾಲಗಳು ತೀರುತ್ತವೆ ರೋಗರುಜಿನಗಳು ವಾಸಿಯಾಗುವವು. ಕುಟುಂಬದಲ್ಲಿ ಸಂತೋಷವೇರ್ಪಡುತ್ತದೆ ಆರೋಗ್ಯ ಚೆನ್ನಾಗಿರುವುದು ಸಮಾಜದಲ್ಲಿ, ಸುತ್ತಮುತ್ತ ಗೌರವ ಆದರಗಳು ಹೆಚ್ಚುತ್ತವೆ ಮೇ ತಿಂಗಳ ಕಡೆಯವಾರದಲ್ಲಿ ಗುರುವು ಮೇಷರಾಶಿಗೆ ಹೋಗುವುದರಿಂದಾಗಿ ಆರ್ಥಿಕ ಮುಗ್ಗಟ್ಟು ಹೆಚ್ಚುತ್ತದೆ ಕುಟುಂಬದಲ್ಲಿ ವೈದ್ಯಕೀಯ ವೆಚ್ಚಗಳು ಹೆಚ್ಚುತ್ತವೆ ವೃತ್ತಿ ಉದ್ಯೋಗಗಳಲ್ಲಿ ಮನೆಯ ಒಳಗೆ ಹೊರಗೆ ಹಲವು ರೀತಿಯ ಸಮಸ್ಯೆಗಳನ್ನು ಎದುರಿಸಬೇಕಾಗುವುದು ಎದುರು ನೋಡುವ ರೀತಿಯಲ್ಲಿ ಕೆಲಸಗಳು ಸಾಗುವುದಿಲ್ಲ ಆದರೂ ರಾಹುವಿನ ಮೂರನೆಯ ಮನೆಯ ಸಂಚಾರದಿಂದಾಗಿ ಸಂತೋಷ, ಉತ್ಸಾಹಗಳುಂಟಾಗುವವು. ಧೈರ್ಯ, ಜಯಗಳುಂಟಾಗುವವು. ಕನಿಷ್ಟ ಸಹೋದರರ ಸಹಾಯ ಹೆಚ್ಚುತ್ತದೆ ಕೋರ್ಟು ವ್ಯವಹಾರಗಳಲ್ಲಿ ಜಯ ದೊರೆಯುತ್ತದೆ ಪ್ರಯಾ ಣದಿಂದ ಆದಾಯವುಂಟಾಗುತ್ತದೆ ತಂದೆಯ ಆರೋಗ್ಯ ಚೆನ್ನಾಗಿರುತ್ತದೆ ತಂದೆಯ ಮೂಲಕ ಆದಾಯವುಂಟು ಮಾವನವರ ಆರೋಗ್ಯ ಆಂದೋಲನಕಾರಿ

**ಮಿಥುನ** (ಮೃಗಶಿರ - 3, 4, ಆರುದ್ರ, ಪುನರ್ವಸು 1,2,3) ರಾಹುವು ದ್ವಿತೀಯದಲ್ಲಿಯೂ ಕೇತುವು ಅಷ್ಟಮದಲ್ಲಿಯೂ ಸಂಚರಿಸುವುದರಿಂದಾಗಿ ಒಳಿತೇನೂ ಆಗುವುದಿಲ್ಲ ಕುಟುಂಬ ಸಮಸ್ಯೆಗಳಿಂದಾಗಿ ವೆಚ್ಚಗಳು ಏರುವವು. ಮನಃಶಾಂತಿ ಯಿರುವುದಿಲ್ಲ ದ್ವಿತೀಯದ ರಾಹುವು ಅಸತ್ಯವನ್ನು ಹೇಳಿಸಿ, ನಾಜೂಕು ಇಲ್ಲದವರನ್ನಾಗಿಸುವನು ಶತ್ರುಬಾಧೆ ಹಾಗೂ ಆಯುಧಗಳಿಂದಾಗಿ ಬಾಧೆಯುಂಟಾಗುವುದು ಆರ್ಥಿಕ ತೊಂದರೆಗಳುಂಟಾಗುವವು. ಕಂಠಕ್ಕೆ ಸಂಬಂಧಿಸಿದ ರೋಗಗಳುಂಟಾಗುವವು. ಗುರುವು ಮೇ ತಿಂಗಳವರೆಗೆ ದಶಮದಲ್ಲಿಯೂ, ವರ್ಷಾಂತ್ಯದಲ್ಲಿ ಹನ್ನೊಂದನೆಯದರಲ್ಲಿಯೂ ಸಂಚಾರ ಮಾಡುವುದರಿಂದ ಆರೋಗ್ಯ ಚೆನ್ನಾಗಿರುವುದು ನಿರುತ್ಸಾಹ ಕಡಮೆಯಾಗುತ್ತದೆ ಧನಾಭಿವೃದ್ಧಿಯುಂಟಾಗುವುದು ಹೊಸ ವೃತ್ತಿ ವ್ಯಾಪಾರದಲ್ಲಿ ಸಂತೋಷ, ಲಾಭಗಳುಂಟಾಗುವವು. ಹಳೆಯ ಸಾಲಗಳು ತೀರುವವು. ಕೀರ್ತಿ ಪ್ರತಿಷ್ಠೆಗಳು ಹೆಚ್ಚುತ್ತವೆ ರೋಗ ನಿವಾರಣೆಯಾಗುವುದು ಸತಿಪತಿಯರಲ್ಲಿ ಅನ್ಯೋನ್ಯತೆ ಹೆಚ್ಚುತ್ತದೆ ವೃತ್ತಿ, ಉದ್ಯೋಗಗಳಲ್ಲಿ, ಹೊಸ ಬದಲಾವಣೆಗಳುಂಟಾಗುವವು. ಇದರಿಂದಾಗಿ ಸಂತೋಷ ಲಾಭಗಳು ಉಂಟಾಗುತ್ತವೆ ಸ್ನೇಹಿತರು, ಜ್ಯೇಷ್ಠ ಸಹೋದರರಿಂದಾಗಿ ಸರಿಯಾದ ಸಮಯದಲ್ಲಿ ಸಹಾಯವೊದಗಿಬರುತ್ತದೆ ಮನೆ ಭೂಮಿಗಳನ್ನು ಕೊಂಡುಕೊಳ್ಳುವ ಅವಕಾಶವುಂಟಾಗುವುದು ಉದ್ಯೋಗದಲ್ಲಿ ಭಡತಿ ದೊರೆಯುವುದು ಹಲವರಿಗೆ ವಿದೇಶಗಳಿಗೆ ಹೋಗಲು ಕಾಲ ಕೂಡಿ ಬರುವುದು ಕುಟುಂಬದಲ್ಲಿ ಶುಭಕಾರ್ಯಗಳು ನಡೆಯುವವು. ಹೆಸರು ಪ್ರತಿಷ್ಠೆಗಳು ಹೆಚ್ಚಾದರೂ, ನಿಮಗಿಂತ ಕಿರಿಯರ ಸ್ನೇಹದಿಂದಾಗಿ ಅಪವಾದವುಂಟಾಗುವುದು

**ಕರ್ಕಾಟಕ** (ಪುನರ್ವಸು - 4, ಪುಷ್ಯಮಿ, ಆಶ್ಲೇಷ) ರಾಹುವು ಈ ರಾಶಿಯಲ್ಲಿಯೂ ಕೇತುವು ಸಪ್ತಮದಲ್ಲಿಯೂ ವರ್ಷ ಪೂರ್ತಿ ಸಂಚರಿಸುವರು ಸತಿಯಿಂದ ಪತಿಗೆ ಅಥವಾ ಪತಿಯಿಂದ ಸತಿಗೆ, ಅಥವಾ ಭಾಗಸ್ಥರಿಂದ ನಷ್ಟ ಉಟಾಗುವುದು. ಕಷ್ಟಗಳುಂಟಾಗುವವು. ಮನೆಯಲ್ಲಿ ವಿವಾಹಾದಿ ಶುಭಕಾರ್ಯಗಳು ತಡವಾಗುತ್ತವೆ ಹತ್ತಿರದ ಸ್ನೇಹಿತರು ಶತ್ರುಗಳಾಗುತ್ತಾರೆ. ಪ್ರಯಾಣದಲ್ಲಿ ಪ್ರಯಾಸವುಂಟಾಗುವುದು ಪಾಸ್‌ಪೋರ್ಟು, ವೀಸಾಗಳು ದೊರೆಯುವುದು ಅತಿಕಷ್ಟವಾಗುತ್ತದೆ ಈ ವರ್ಷವೆಲ್ಲ ಶನಿಯು ದಶಮದಲ್ಲಿ ಚಲಿಸು

ವನು ಈ ಸಂಚಾರವೂ ಸಹ ಒಳ್ಳೆಯದಲ್ಲ ಹೊಸ ವಾತಾವರಣದಲ್ಲಿ ಕೆಲಸಮಾಡುವಂತಹ ನಿರ್ಬಂಧವುಂಟಾಗುವುದು ಸಾಲದ ಬಾಧೆಗಳು ಹೆಚ್ಚುತ್ತವೆ ಕುಟುಂಬದಲ್ಲಿ ಸಂತಸ ಕಡಮೆಯಾಗುವುದು ಕೆಲಸ ಮಾಡುವ ಸ್ಥಳದಲ್ಲಿ ನಿರುತ್ಸಾಹದಿಂದಾಗಿ ಶ್ರದ್ಧೆ ಕಡಮೆಯಾಗುವುದು ವಿದೇಶೀ ಪ್ರಯಾಣದಿಂದ ಹಾಗೂ ವ್ಯಾಪಾರದಿಂದಾಗಿ ನಷ್ಟ ಸಂಭವ ಶನಿಯ ಅಶುಭ ದೃಷ್ಟಿ ಕುಜನ ಮೇಲೆ ಬಿದ್ದು ಆಗಾಗ ವಾಹನಗಳು ರಿಪೇರಿ ಆಗುವುದರಿಂದಾಗಿ ಹೆಚ್ಚಿನ ಹಣ ಕಳೆಯುವುದು ತಂದೆಯ ಔಷಧಗಳಿಗಾಗಿ ಖರ್ಚು ಹೆಚ್ಚುವುದು ಆದರೂ ಮೇ ತಿಂಗಳ ಕಡೆಯ ವಾರದ ವರೆಗೆ ಗುರುವು ನವಮದಲ್ಲಿರುವನು ನಂತರ ವರ್ಷಾಂತ್ಯದ ವರೆಗೆ ದಶಮ ಸ್ಥಾನದಲ್ಲಿ ಸಂಚರಿಸುವುದರಿಂದ ಒಳ್ಳೆಯದು ಆಗುತ್ತದೆ ಪ್ರೇಯಸಿಯಿಂದ ಆದಾಯವುಂಟಾಗುವುದು ಮದುವೆಯಾಗಲು ಕಾದಿರುವವರಿಗೆ ಮದುವೆಯ ಯೋಗ ಒದಗಿ ಬಂದು ಮನಸ್ಸಿಗೆ ಸಂತೋಷವುಂಟಾಗುವುದು ಮನೆ, ಭೂಮಿ, ವಾಹನ ಮೊದಲಾದವನ್ನು ಕೊಂಡುಕೊಳ್ಳಲು ಒಳ್ಳೆಯ ಅವಕಾಶಗಳು ಕೂಡಿ ಬರುವುವು. ಆರ್ಥಿಕ ಬಿಕ್ಕಟ್ಟುಗಳು ತೊಲಗಿ ಒಳ್ಳೆಯ ಧನಾದಾಯವಾಗುವುದು ಹೊಸ ವೃತ್ತಿ ಉದ್ಯೋಗಗಳಲ್ಲಿ ಪ್ರಯತ್ನಗಳು ಸಫಲವಾಗುವುವು. ಸಾಲದ ಬಾಧೆ ಕಡಮೆಯಾಗುವುದು ಆಕಸ್ಮಿಕವಾಗಿ ಧನಲಾಭ ವುಂಟಾಗುವುದು ಸಮಾಜದಲ್ಲಿ ಗೌರವ, ಮರ್ಯಾದೆ, ಮಾತಿಗೆ ಬೆಲೆ ಹೆಚ್ಚಾಗುವುವು.

**ಸಿಂಹ** (ಮಖ, ಪುಬ್ಬ, ಉತ್ತರ 1 ಪಾದ) ಈ ವರ್ಷವೆಲ್ಲ ಶನಿಯು ನವಮದಲ್ಲಿಯೂ ರಾಹುವು ದ್ವಾದಶದಲ್ಲಿಯೂ ಸಂಚರಿಸುವರು ಸ್ನೇಹಿತರು, ಬಂಧುಗಳ ನಡುವೆ ವಿರೋಧಗಳು ತಲೆದೋರುವುವು. ಕುಟುಂಬ ಕಲಹಗಳು ಹೆಚ್ಚಾಗಿ, ವೃತ್ತಿ ಉದ್ಯೋಗಗಳಲ್ಲಿ ಶಾಂತಿ ಕ್ಷೀಣಿಸುವುವು. ತಂದೆಯ ಆರೋಗ್ಯ ಕ್ಷೀಣಿಸುತ್ತದೆ ರಾಹುವಿನ ದ್ವಾದಶ ಸಂಚಾರದಿಂದಾಗಿ ನೇತ್ರರೋಗ, ಜ್ವರಪೀಡೆಯುಂಟಾಗುವುದು ವ್ಯರ್ಥ ವೆಚ್ಚಗಳು ಹೆಚ್ಚುವುವು. ರಾತ್ರಿಗಳಲ್ಲಿ ನಿದ್ದೆ ಕಡಮೆಯಾಗುತ್ತದೆ ಹೆಂಡತಿ ಮಕ್ಕಳನ್ನು ಬಿಟ್ಟು ಬಹಳ ದೂರದಲ್ಲಿ ವಾಸವಾಗಬೇಕಾಗುವುದು ಈ ರಾಶಿಯವರಿಗೆ ಆರೋಗ್ಯ ಭಂಗವುಂಟಾಗುವುದು ಪ್ರಯಾಣ ಕೈಗೂಡಿ ಬರುವುದಿಲ್ಲ ಕುಟುಂಬ ಕಲಹಗಳಿಂದಾಗಿ ವೆಚ್ಚ ಹೆಚ್ಚು ಆದರೂ ಕೇತುವು ಈ ರಾಶಿಯ ಆರನೆಯ ಮನೆಯಲ್ಲಿಯೂ, ಗುರುವು ಮೇ ಕಡೆಯವಾರದಿಂದ ನವಮದಲ್ಲಿಯೂ ಸಂಚರಿಸುವುದರಿಂದಾಗಿ ಹಲವು ಬಗೆಯ ಒಳ್ಳೆಯದು ನಡೆಯುವುವು. ಪ್ರಯಾಣವು ಹೆಚ್ಚಿನ ಆದಾಯವನ್ನುಂಟುಮಾಡುವುದು ಸಹೋದರ ಸಹೋದರಿಯರ ಆದರ ಹೆಚ್ಚಾಗುತ್ತದೆ ವಿವಾಹವಾಗದವರಿಗೆ ಆ ಯೋಗ ಕೂಡಿಬರುತ್ತದೆ ಬಹಳ ದಿನಗಳಿಂದ ಎಳೆಯುತ್ತಿದ್ದ ಕೋರ್ಟುವ್ಯವಹಾರಗಳು ಒಂದು ದಾರಿಗೆ ಬರುತ್ತದೆ ಎಲ್ಲ ರಂಗಗಳಲ್ಲಿಯೂ ಅಭಿವೃದ್ಧಿಯನ್ನು ಕಾಣಬಹುದು ಗುರುಗಳ, ಮಹನೀಯರ ಆಶೀರ್ವಚನವನ್ನು ಪಡೆಯಬಹುದು ಶತ್ರುಗಳ ಬಾಧೆ ಕಡಿಮೆಯಾಗುವುದು ಆಕಸ್ಮಿಕ ಧನಲಾಭವುಂಟಾಗುವುದು ಕಳೆದ ವರ್ಷ ನಡೆಸಿದ ವಿದೇಶೀ ವ್ಯಾಪಾರದಲ್ಲಿ ಉಂಟಾದ ಕಷ್ಟನಷ್ಟಗಳು ತೊಲಗಿ, ಈ ವರ್ಷ ಹೆಚ್ಚು ಲಾಭವುಂಟಾಗುವುದು ತೀರ್ಥಯಾತ್ರೆ ನಡೆಯುವುದು ಪುತ್ರಲಾಭವುಂಟಾಗುವುದು ಲಾಟರಿ ಯೋಗದಿಂದ ಧನಾದಾಯವುಂಟಾಗುವುದು ಕುಟುಂಬದಲ್ಲಿ ಸಂತೋಷವುಂಟಾಗುವುದು

**ಕನ್ಯಾ** (ಉತ್ತರ-2,3,4, ಹಸ್ತ, ಚಿತ್ತ-1,2) ಈ ವತ್ಸರದಲ್ಲಿ ಪೂರ್ತಿಯಾಗಿ ಶನಿಯು ಅಷ್ಟಮದಲ್ಲಿಯೂ, ಕೇತುವು ಪಂಚಮದಲ್ಲಿಯೂ ಸಂಚರಿಸುವರು ಗುರುವು ಸಹ ಮೇ ಕಡೆಯವಾರದ ವರೆಗೆ ಅಷ್ಟಮದಲ್ಲಿ ಸಂಚರಿಸುವನು ಮೇಲಿನ ಗ್ರಹಗಳ ಸಂಚಾರದಿಂದಾಗಿ, ಪರೀಕ್ಷೆಗಳೂ, ಬಾಧೆಗಳೂ ಉಂಟಾಗುವುವು. ಎಲ್ಲ ಕಡೆಗಳಿಂದಲೂ ಕಷ್ಟಗಳು ಕಾಡುತ್ತವೆ - ಎಂದು ಪುರಾಣದಲ್ಲಿ ಹೇಳಲಾಗಿದೆ ಆರೋಗ್ಯದ ಚಿಂತೆ ಬಾಧಿಸುತ್ತದೆ ಧನನಷ್ಟ ಉಂಟಾಗುವುದು ಶನಿಯ ಸಂಚಾರವನ್ನು ಅಷ್ಟಮ ಶನಿ ಸಂಚಾರವೆನ್ನುವರು ಧನನಷ್ಟ ದೊಡನೆಯೇ ವ್ಯರ್ಥ ಕಷ್ಟಗಳು, ಪ್ರಯೋಜನವಿಲ್ಲದ ವೆಚ್ಚಗಳು ಬೆಳೆಯುತ್ತವೆ ಕೆಲವರಿಗೆ ಸೆರೆಮನೆವಾಸವೂ ಏರ್ಪಡಬಹುದು ಸುತ್ತಣವರೊಡನೆ ವಿರೋಧ ಹೆಚ್ಚುತ್ತದೆ ಕೋರ್ಟ್ ವ್ಯವಹಾರಗಳು ಮುಗಿಯುವುದಿಲ್ಲವಾಗಿ ತುಂಬ ಕಷ್ಟಗಳುಂಟಾಗುವುವು. ಮರ್ಮಸ್ಥಾನದಲ್ಲಿ ರೋಗ ಸಂಭವ ಮಕ್ಕಳ ಅನಾರೋಗ್ಯದಿಂದಲೂ, ಶಿಕ್ಷಣದಿಂದಲೂ ಹೆಚ್ಚಿನ ವೆಚ್ಚಗಳುಂಟಾಗುವುವು. ಕೆಲವರಿಗೆ ಲಾಟರಿಯಿಂದಾಗಿ ಧನವ್ಯಯವುಂಟಾಗುವುದು ಗುರುವಿನ ಅಷ್ಟಮ ಸಂಚಾರದಿಂದಾಗಿ ಆರ್ಥಿಕ ಸಂಕಷ್ಟಗಳು ಹೆಚ್ಚುತ್ತವೆ ಬರಬೇಕಾದ ಹಣ ಬಾರದೆ ಹೆಚ್ಚಿನ ಕಷ್ಟವುಂಟಾಗುವುದು ಆದರೂ ರಾಹುವಿನ ಏಕಾದಶ ಸಂಚಾರದಿಂದ ಸ್ವಲ್ಪ ಒಳಿತಾಗುವುದು ಗುರುವು ಸಹ ಮೇ ತಿಂಗಳ ಕಡೆಯ ವಾರದವರೆಗೆ ಹಲವು ರೀತಿಯ ಒಳಿತನ್ನೆಸಗುವನು ಮದುವೆ ನಿಶ್ಚಯವಾಗುವುದು ವ್ಯಾಪಾರದಲ್ಲಿ ಆರ್ಥಿಕ ಅಭಿವೃದ್ಧಿ ವುಂಟಾಗುವುದು ಹನ್ನೊಂದನೆಯಸ್ಥಾನದಲ್ಲಿ ರಾಹುವು ಬರುವದರಿಂದ ಸ್ನೇಹಿತರು ಸಮಯದಲ್ಲಿ ಸಹಾಯ ಮಾಡುವರು ಗೌರವವುಂಟಾಗುವುದು ಬಹುದಿನದಿಂದ ವಿಳಂಬವಾಗಿದ್ದ ಜೀವವಿಮೆ, ಪಿಂಛಣಿ ಹಣ ಕೈಗೆ ಬರುವುವು. ಸ್ವಲ್ಪವೂ ಶ್ರಮವಿಲ್ಲದೆ ಇತರರಿಂದ ಧನವನ್ನು ಪಡೆಯಬಲ್ಲವರಾಗುವಿರಿ

**ತುಲಾ** (ಚಿತ್ತ - 3,4, ಸ್ವಾತಿ, ವಿಶಾಖ - 1,2,3) ಈ ವರ್ಷವೆಲ್ಲ ಕೇತುವು ಚತುರ್ಥದಲ್ಲಿಯೂ, ಶನಿಯು ಸಪ್ತಮ ರಾಶಿಯಲ್ಲಿಯೂ ಸಂಚರಿಸುವರು ಮೇ ತಿಂಗಳ ಕೊನೆಯವರೆಗೆ ಗುರುವು ಆರನೆಯದರಲ್ಲಿ ಸಂಚರಿಸುವನು ಅಧರ್ಮದ ಆಲೋಚನೆಗಳಿಂದಲೂ, ಪಾಪಕರ್ಮಗಳನ್ನು ಮಾಡಿರುವುದರಿಂದಲೂ ಕೆಲವರಿಗೆ ಮನಃಶಾಂತಿಯಿರದು ತಾಯಿಯ ಆರೋಗ್ಯದ ಬಗ್ಗೆ ಹೆಚ್ಚು ಎಚ್ಚರಿಕೆಯಿಂದ ಇರಬೇಕು ಆಸ್ತಿಯ ವಿಭಾಗದಿಂದಾಗಿ ಬಂಧುಗಳ ನಡುವೆ ಶತ್ರುತ್ವವುಂಟಾಗುವುದು ವಿದ್ಯಾರ್ಥಿಗಳಿಗೆ ಅಧಿಕ ಶ್ರಮ ಅತ್ಯಧಿಕ ಶ್ರಮವಿಲ್ಲದೆ ಉತ್ತೀರ್ಣರಾಗುವುದಿಲ್ಲ ಆರೋಗ್ಯ ಮನಃಶಾಂತಿ ಲೋಪಗೊಳ್ಳುವುದು ಸುತ್ತಲವರೊಂದಿಗೆ ಜಗಳ, ತಗಾದೆ ಹೆಚ್ಚುತ್ತದೆ ಸಮಾಜದಲ್ಲಿ ಕೆಟ್ಟಹೆಸರು ಹಾಗೂ ವ್ಯಾಪಾರದಲ್ಲಿ ನಷ್ಟಗಳು ಕೋರ್ಟಿನ ವ್ಯವಹಾರಗಳು ಈ ವರ್ಷವೆಲ್ಲ ಪೀಡಿಸುತ್ತವೆ ವಿದೇಶೀ ಪ್ರಯಾಣ ಹಾಗೂ ವ್ಯಾಪಾರಗಳು ಅಷ್ಟಾಗಿ ಪ್ರಯೋಜನಕಾರಿಯಾಗುವುದಿಲ್ಲ ಪ್ರಯಾಣದಲ್ಲಿ ಧನನಷ್ಟ, ಶರೀರಕ್ಕೆ ಹಲವು ಭಾಗಗಳಲ್ಲಿ ತೊಂದರೆ ಈ ವರ್ಷವೂ ನೀವು ನಿಮ್ಮ ಮನೆಯಿಂದ ಬಹುದೂರದಲ್ಲಿ ವಾಸವಾಗಿರಬೇಕಾಗಿ ಬರುತ್ತದೆ ಆದರೂ ರಾಹುವು ಈ ರಾಶಿಯಲ್ಲಿ ದಶಮ ಚಾರದಲ್ಲಿಯೂ ಗುರುವು ಮೇ ಕೊನೆಯಿಂದ ಸಪ್ತಮ ಸಂಚಾರ ಮಾಡುವುದರಿಂದ ಹೆಚ್ಚು ಉತ್ಸಾಹ, ಸಂತೋಷಗಳುಂಟಾಗುವುವು. ಬೇಗನೆ ವಿವಾಹವಾಗುವುದು ಪುತ್ರಲಾಭ, ವೃತ್ತಿ ಉದ್ಯೋಗಗಳಲ್ಲಿ ಪರಿವರ್ತನೆ ಕುಟುಂಬದಲ್ಲಿ ಸಂತೋಷ ತುಂಬಿ ಇರುತ್ತದೆ ಸತಿಪತಿಯರ ನಡುವೆ ಪ್ರೇಮಾನುರಾಗ ಹೆಚ್ಚುತ್ತದೆ ಕೋರ್ಟು ವ್ಯವಹಾರಗಳಲ್ಲಿ ವರ್ಷದ ಕೊನೆಯಲ್ಲಿ ಜಯವುಂಟಾಗುತ್ತದೆ ವೃತ್ತಿ, ಉದ್ಯೋಗ, ವ್ಯಾಪಾರಗಳಲ್ಲಿ ಎದುರು ನೋಡದ ರೀತಿಯ ಆದಾಯ ಹಲವರಿಗೆ ವಿದೇಶಯಾತ್ರೆಯ ಭಾಗ್ಯ ಮಾಡುವ ಕೆಲಸದಲ್ಲಿ ಉಂಟಾಗುವ ಬದಲಾವಣೆಯಿಂದ ಸಂತಸ ಹೆಚ್ಚುವುದು ಭಡತಿಯಿಂದ ಕೂಡಿದ ಬದಲಾವಣೆ ಕೆಲವರಿಗುಂಟು

**ವೃಶ್ಚಿಕ** (ವಿಶಾಖ - 4, ಅನುರಾಧ, ಜ್ಯೇಷ್ಠ) ಈ ರಾಶಿಯವರಿಗೆ ರಾಹುವು ವರ್ಷಪೂರ್ತಿ ನವಮ

ದಲ್ಲಿ ಸಂಚರಿಸುವನು ಗುರುವು ಮೇ ಅಂತ್ಯದಿಂದ ಆರನೆಯ ಸ್ಥಾನದಲ್ಲಿ ಸಂಚರಿಸುವನು ಈ ಎರಡೂ ಸಂಚಾರಗಳೂ ಒಳ್ಳೆಯದಲ್ಲ ದೂರಪ್ರಯಾಣ, ವಿದೇಶೀಯಾತ್ರೆಗಳು ನಷ್ಟದಾಯಕ ವಿದ್ಯಾರ್ಥಿಗಳ ಹೆಚ್ಚಿನ ವಿದ್ಯಾಭ್ಯಾಸದಲ್ಲಿಯೂ ವಿದ್ಯಾರ್ಥಿ ವೇತನ ಪಡೆಯುವುದರಲ್ಲಿಯೂ ಅಡ್ಡಿ ಆತಂಕಗಳು ಇಡೀ ವರ್ಷದಲ್ಲಿ ಆರ್ಥಿಕ ಇಕ್ಕಟ್ಟುಗಳುಂಟು ಮಕ್ಕಳ ಆರೋಗ್ಯ ಶಿಕ್ಷಣಗಳಲ್ಲಿ ಹೆಚ್ಚಿನ ವೆಚ್ಚಗಳುಂಟು ವೃತ್ತಿ ವ್ಯಾಪಾರಗಳಲ್ಲಿ ಕಷ್ಟ ನಷ್ಟಗಳುಂಟಾಗಿ, ನಷ್ಟದಲ್ಲಿ ಪರ್ಯವಸಾನ ತಂದೆಯ ಆರೋಗ್ಯ ಚೆನ್ನಾಗಿರುವುದಿಲ್ಲವಾಗಿ ಅತ್ತ ಕಡೆಯಿಂದ ಸಹಾಯವನ್ನು ಬಯಸುವುದು ತರವಲ್ಲ ಸಾಲಗಳು ಬಹುಶ್ರಮದಿಂದ ತೀರುತ್ತವೆ ಮನೆಯ-ಭೂಮಿಯ,ಮೇಲೆ ಹಾಕಿದ ಹಣಕ್ಕೆ ನಿರೀಕ್ಷಿತ ಲಾಭಗಳು ಬರುವುದಿಲ್ಲ ಆದರೂ ಕೇತುವಿನ ಮೂರನೆಯ ಮನೆಯ ಸಂಚಾರವೂ, ಶನಿಯ ಆರನೆಯ ಸ್ಥಾನದ ಸಂಚಾರವೂ, ಗುರುವಿನ ಐದನೆಯ ಸ್ಥಾನದ ಸಂಚಾರವೂ, ಮೇ ತಿಂಗಳ ಕೊನೆಯವರೆಗೆ ಒಳ್ಳೆಯದನ್ನುಂಟುಮಾಡುತ್ತದೆ ಬಹುಕಾಲದಿಂದ ಕೆಲಸವಿಲ್ಲದೆ ಇರುವವರಿಗೆ ಕೆಲಸ ದೊರೆಯುವುದು. ಕಚೇರಿಗಳಲ್ಲಿ ಕೆಲಸ ಮಾಡುವವರಿಗೆ ಎದುರು ನೋಡದ ಭಡತಿ ದೊರೆಯುವುದು ಪುಣ್ಯಸ್ಥಳಗಳ ತೀರ್ಥ ಕ್ಷೇತ್ರ ಯಾತ್ರೆಗಳುಂಟಾಗುವುವು. ಕುಟುಂಬದಲ್ಲಿ ಶುಭಕಾರ್ಯಗಳುಂಟಾಗುವುವು. ವ್ಯಾಪಾರಿಗಳಿಗೆ ಹೊಸ ಗಿರಾಕಿಗಳಿಂದಾಗಿ ಲಾಭ ದೊರೆಯುವುದು. ಷೇರುಗಳ ಮೂಲಕ ಹೆಚ್ಚಿನ ಲಾಭಗಳುಂಟಾಗುವುವು. ಕೇತುವಿನ ಮೂರನೆಯ ಸ್ಥಾನದ ಸಂಚಾರದಿಂದಾಗಿ ಎಲ್ಲರೀತಿಯ ಮನಃಕ್ಲೇಷಗಳು ದೂರವಾಗುವುವು. ಕಿರಿಯ ತಮ್ಮ ತಂಗಿಯರಿಂದ ನೆರವು ದೊರೆಯುವುದು ಕ್ರೀಡಾಪಟುಗಳು ಒಳ್ಳೆಯ ಆದಾಯ ಪಡೆಯುವರು ಹೆಸರು ಕೀರ್ತಿಗಳು ಹೆಚ್ಚುತ್ತವೆ ಧನಾದಾಯವು ವೃದ್ಧಿಸುತ್ತದೆ.

**ಧನುಸ್** (ಮೂಲ - ಪೂರ್ವಾಷಾಢ, ಉತ್ತರಾಷಾಢ - 1) · ಈ ವರ್ಷದಲ್ಲಿನ ಎರಡನೆಯ ಚಾರದಲ್ಲಿ ಕೇತುವು, ಐದನೆಯ ರಾಶಿಯಲ್ಲಿ ಶನಿ, ಹಾಗೂ ಅಷ್ಟಮದಲ್ಲಿ ರಾಹುವು ಸಂಚರಿಸುವರು ಈ ಸಂಚಾರಗಳಿಂದಾಗಿ ಮನೆಯಲ್ಲಿ ಕಲಹಗಳು ಕಷ್ಟಗಳು ಹೆಚ್ಚಾಗಿ ಮನಃಶಾಂತಿ ಲೋಪಗೊಳ್ಳುವುದು. ವ್ಯಾಪಾರದಲ್ಲಿ ಹಾಗೂ ವೃತ್ತಿಯಲ್ಲಿ ಧನನಷ್ಟವುಂಟಾಗುವುದು ಕುಟುಂಬ ಕಲಹಗಳು ಕೋರ್ಟು ವ್ಯವಹಾರವಾಗಿ ಪರಿಣಮಿಸುವುವು. ವಿವಾಹಕ್ಕೆ ಅಡ್ಡಿಯುಂಟಾಗುವುದು. ಮುಖದಲ್ಲಿ, ಬಾಯಲ್ಲಿ, ಹೃದಯದಲ್ಲಿ ಅನಾರೋಗ್ಯ ಕಂಡುಬರುತ್ತದೆ. ಒಂದಿಬ್ಬರಿಗೆ ಮರಣ ಭಯವೂ ಉಂಟು ವಿದ್ಯಾರ್ಥಿಗಳಿಗೆ ವಿದ್ಯೆಯಲ್ಲಿ ಶ್ರದ್ಧೆ ಕಡಿಮೆಯಾಗುವುದು ವಿದೇಶೀ ಯಾತ್ರೆಯಲ್ಲಿ ಅನಿರೀಕ್ಷಿತವಾದ ಕಷ್ಟಗಳುಂಟಾಗುವುವು. ತಂದೆಯ ಆರೋಗ್ಯ ಕ್ಷೀಣಿಸುವ ಅವಕಾಶಗಳಿವೆ ಶನಿಯ ಐದನೆಯ ಚಾರದಿಂದಾಗಿ ಮಕ್ಕಳ ಆರೋಗ್ಯದ ಬಗ್ಗೆ ಚಿಂತೆ ಹೆಚ್ಚುವುದು ತಾಯಿಯ ಆರೋಗ್ಯವೂ ಅತೃಪ್ತಿದಾಯಕ ಆರ್ಥಿಕ ಸಂಕ್ಷೋಭೆ ಹೆಚ್ಚುತ್ತದೆ ಸಾಲದಬಾಧೆ ಜಾಸ್ತಿಯಾಗುವುದು ಷೇರುಗಳಲ್ಲಿ ತೊಡಗಿಸಿದ ಬಂಡವಾಳದಿಂದಾಗಿ ಹೆಚ್ಚಿನ ಲಾಭ ನಿರೀಕ್ಷಿಸುವಂತಿಲ್ಲ ಗುರುವು ಈ ರಾಶಿಯಲ್ಲಿ ನಾಲ್ಕನೆಯದರಲ್ಲಿ ಮೇ ಕೊನೆಯವರೆಗೂ, ಆ ನಂತರ ವರ್ಷಾಂತ್ಯದವರೆಗೆ ಐದನೆಯದರಲ್ಲಿಯೂ ಸಂಚರಿಸುತ್ತಾನೆ. ಇದರಿಂದಾಗಿ ಋಣ, ರೋಗ, ಶತ್ರು, ಬಾಧೆಗಳಿಂದ ಮುಕ್ತಿ ದೊರೆಯುವುದು ಬಡ್ಡಿ ವ್ಯವಹಾರದಲ್ಲಿ ಹೆಚ್ಚಿನ ಲಾಭ ಪುಣ್ಯಕ್ಷೇತ್ರ ದರ್ಶನ, ಗುರು ಸಂತ ಮಹನೀಯರ ದರ್ಶನವಾಗುವುದು ಕುಟುಂಬದಲ್ಲಿ ಶುಭಕಾರ್ಯಗಳು ನಡೆದು ಸಂತಸ ತುಂಬಿ ಬರುವುದು ವಿಜಯವಂತವಾಗಿ ವಿದೇಶಯಾತ್ರೆ ಮಾಡಬಹುದು ನ್ಯಾಯವಾದಿಗಳಿಗೆ ಹೊಸ ಕ್ಲೈಂಟ್‌ಗಳು ದೊರೆಯುವರು ಗೌರವ ಮರ್ಯಾದೆಗಳು ಹೆಚ್ಚುತ್ತವೆ ಹೊಸ ವಾಹನಗಳನ್ನು ಕೊಳ್ಳುವ ಯೋಗವಿದೆ ಮನಃಶಾಂತಿ ವುಂಟಾಗುವುದು ಹೊಸ ಮನೆಯ ಕ್ರಯ ಅಥವಾ ನಿರ್ಮಾಣದ ಯೋಗವಿದೆ ಮಿತ್ರರಿಂದ ಸಹಾಯ ದೊರೆಯುತ್ತದೆ ಹೊಸ ವ್ಯಾಪಾರ ಮಾಡುವಲ್ಲಿ ಜಯ ದೊರೆಯುವುದು

**ಮಕರ** (ಉತ್ತರಾಷಾಢ - 2,3,4, ಶ್ರವಣ, ಧನಿಷ್ಠಾ - 1,2) ಕೇತುವು ಜನ್ಮದಲ್ಲಿಯೂ, ರಾಹುವು ಸಪ್ತಮದಲ್ಲಿಯೂ ಈ ರಾಶಿಯಲ್ಲಿ ಸಂಚರಿಸುವರು ಸ್ವಲ್ಪವೂ ಮನಃಶಾಂತಿಯಿರುವುದಿಲ್ಲ ಬಂಧುಗಳ ಅನಾರೋಗ್ಯ ಕಾರಣದಿಂದಾಗಿ ಚಿಂತೆ ಹೆಚ್ಚಾಗಿ, ಸಂತೋಷವಿರದು ಮಿತ್ರರೂ ಶತ್ರುಗಳಾಗಿ ಬಿಡುವರು ಕೆಲವರಿಗೆ ಮನೆ ಬಿಟ್ಟು ಹೋಗುವಂತಹ ಪರಿಸ್ಥಿತಿಗಳು ವ್ಯಾಪಾರದಲ್ಲಿ ಭಾಗಸ್ವಾಮಿಗಳು ಮೋಸ ಮಾಡುವ ಅವಕಾಶವನ್ನು ಎದುರು ನೋಡುತ್ತಿರುವರು ಪ್ರೀತಿಯ ಪತ್ನಿ ಅಸಹ್ಯ ಪಡುವಂತಹ ಪರಿಸ್ಥಿತಿ ಪ್ರಯಾಣದಲ್ಲಿ ಎಚ್ಚರಿಕೆಯಿಲ್ಲದಿದ್ದಲ್ಲಿ ಧನನಷ್ಟ, ಕುಟುಂಬದಲ್ಲಿ ಅನಾರೋಗ್ಯದಿಂದಾಗಿ ಔಷಧಗಳಿಗೆ ವೆಚ್ಚ ಹೆಚ್ಚು ವಿದ್ಯಾರ್ಥಿಗಳು ಶಿಕ್ಷಣದಲ್ಲಿ ಹೆಚ್ಚಿನ ಶ್ರದ್ಧೆ ತೋರಿಸುವುದು ಒಳ್ಳೆಯದು ಶನಿಯು ನಾಲ್ಕನೆಯ ಮನೆಯಲ್ಲಿ ಸಂಚರಿಸುವನು ಅದು ಶನಿಯ ನೀಚಸ್ಥಾನ ಇದನ್ನು ಅಷ್ಟಮ ಶನಿಯೆನ್ನುತ್ತಾರೆ ಇದರಿಂದಾಗಿ ಪ್ರಯತ್ನವಿಲ್ಲದೆ ಪ್ರಶಾಂತಿಯಿರದು ಪಾಪಕಾರ್ಯಗಳ ತೊಡಗಲು ಸಂಕಲ್ಪ ತಲೆದೋರುವುದು ಮೆ ಕೊನೆಯವರೆಗೆ ಗುರುವು ಮೂರನೆಯ ಸ್ಥಾನದ ಚಲಿಸಿದರೂ ಒಳಿತೇನೂ ಆಗದು ಪರೋಕ್ಷವಾ ಶತ್ರುಬಾಧೆ ಹೆಚ್ಚುತ್ತದೆ ಕಚೇರಿಯಲ್ಲಿ ಮೇಲಧಿಕಾ ವಿಮುಖತೆ ಹೊಂದುವನು ಕೈಕೆಳಗೆ ಕೆಲಸ ಮಾ ವವರ ನೆರವು ಲಭಿಸುವುದಿಲ್ಲ ಆದರೂ ಗುರು ತನ್ನ ಏಳನೆ ನೋಟವನ್ನು ಏಳನೇ ಸ್ಥಾನದಲ್ಲಿ ಹರಿ ಒಳಿತನ್ನುಂಟುಮಾಡುವನು ಇದರಿಂದಾಗಿ ಮದ ವೆಯಾಗದವರೆಗೆ ಮದುವೆಯಾಗುವುದು ಪುತ್ರಭ ಗ್ಯವುಂಟಾಗುವುದು ವಿದೇಶೀ ವ್ಯಾಪಾರದಲ್ಲಿ ಏ ಗೆಯಾಗುವುದು ಆರ್ಥಿಕ ಮುಗ್ಗಟ್ಟು ತೊಲಗಿ ಸುಖವಾಗುವುದು ಋಣ ರೋಗ ಬಾಧೆಗಳ ದೂರವಾಗುವುವು. ಸ್ಪರ್ಧೆಗಳಲ್ಲಿ ಜಯ ದೋ ಯುವುವು. ಹೊಸ ವಾತಾವರಣದಲ್ಲಿ ಹೊಸ ವ್ಯ ಯನ್ನು ಮಾಡುವ ಯೋಗ ವುಂಟಾಗುವುದು ಎ ರಂಗದಲ್ಲಿಯೂ ಜಯವುಂಟಾದರೂ ಆತ್ತೆಯವ ಆರೋಗ್ಯ ಚಿಂತೆಗೀಡು ಮಾಡುತ್ತದೆ ಮೇ ತಿಂಗಳ ಕೊನೆಯಿಂದ ನಾಲ್ಕನೆಯ ಸ್ಥಾನದಲ್ಲಿ ಸಂಚಾರಮಾಡುವ ಗುರುವು ವಾಹನ ಪ್ರಾಪ್ತಿಯೋಗ ತರುವನು ಆರೋಗ್ಯ ಉತ್ತಮವಾಗುವುದು ನೂತನ ವಸ್ತ್ರಾಭರಣಗಳನ್ನುಂಟುಮಾಡುವನು

**ಕುಂಭ** (ಧನಿಷ್ಠ - 3,4, ಶತಭಿಷ, ಪೂ ಭಾ - 1,2,3) ಈ ರಾಶಿಯಲ್ಲಿ ವರ್ಷಪೂರ್ತಿಯಾಗಿ ಹನ್ನೆರಡನೆಯ ಸ್ಥಾನದಲ್ಲಿ ಕೇತುವು ಸಂಚರಿಸುವನು ಒಳಿತು - ಕೆಡುಕು ಕೂಡಿಬರುತ್ತದೆ ಸತಿಪತಿ ವಿರೋಧ, ವಿಷ ಜಂತುಭಯ, ವ್ಯರ್ಥ ವೆಚ್ಚ, ನಿದ್ರೆ ನಾಶ, ಆರ್ಥಿಕ ಇಬ್ಬಂದಿಗಳುಂಟು ಮೇ ತಿಂಗಳ ಕೊನೆಯಿಂದ, ಶತ್ರುಬಾಧೆ ಹೆಚ್ಚು, ಕಚೇರಿಯಲ್ಲಿ ಕೆಲಸ ಮಾಡುವ ಕಡೆ ಮನಸ್ತಾಪ ಆದರೂ ಗುರುವಿನ ನೋಟಕ್ಕೆ ಸುಖವನ್ನು ನೀಡುವ ಶಕ್ತಿಯುಂಟು ಇದರಿಂದಾಗಿ ವಿವಾಹವಾಗದವರಿಗೆ ವಿವಾಹಪ್ರಾಪ್ತಿ ಪುತ್ರಹೀನರಿಗೆ ಪುತ್ರಪ್ರಾಪ್ತಿ ವಿದೇಶ ವ್ಯಾಪಾರದಲ್ಲಿ ಹೆಚ್ಚು ಲಾಭಗಳುಂಟು ಆರ್ಥಿಕ ಮುಗ್ಗಟ್ಟು ತೊಲಗಿ, ಋಣಬಾಧೆ ತೀರುವುದು ತಂದೆಯ ಆರೋಗ್ಯ ಚೆನ್ನಾಗುವುದು ಮೊದಲ ಐದು ತಿಂಗಳು ಗುರುವು ಎರಡನೆಯ ರಾಶಿಯಲ್ಲಿ ಸಂಚರಿಸುವನು ಕುಟುಂಬದಲ್ಲಿ ಸಂತೋಷವುಂಟಾಗುವುದು. ಇದುವರೆಗೆ ನಿಂತಿದ್ದ ಶುಭಕಾರ್ಯಗಳೆಲ್ಲ ನಡೆಯುವುವು. ವರ್ಷವೆಲ್ಲ ಶನಿಯು ಮೂರನೆಯ ಸ್ಥಾನದಿಂದ ಒಳ್ಳೆಯ ಫಲಗಳನ್ನು ನೀಡುವನು ಇದರಿಂದಾಗಿ ಮಾನಸಿಕ ಚಿಂತೆ ದೂರವಾಗುವುದು ತಮ್ಮ ತಂಗಿಯರ ನೆರವು ಕೂಡಿಬರು

ವುದು ಕಚೇರಿಗಳಲ್ಲಿ ಕೆಲಸಮಾಡುವ ಜನರಿಗೆ ಭಡತಿ, ವೇತನ ಹೆಚ್ಚಳಗಳುಂಟಾಗುವುವು. ದೇಹಾರೋಗ್ಯ ಹೆಚ್ಚುವುದು ಕ್ರೀಡಾ ಪಟುಗಳಿಗೆ ಜಯವುಂಟಾಗಿ ಹೆಸರು, ಕೀರ್ತಿ, ಧನಗಳ ಆಯವಾಗುವುದು ಕೋರ್ಟು ವ್ಯವಹಾರಗಳಲ್ಲಿ ಜಯವುಂಟಾಗುವುದು ವಿದೇಶಿ ವ್ಯಾಪಾರದಲ್ಲಿ ಏಳಿಗೆಯುಂಟಾಗಿ ಹೆಚ್ಚು ಲಾಭವುಂಟಾಗುವುದು ಉಪನ್ಯಾಸಕರಿಗೆ, ಹರಿಕಥೆಗಾರರಿಗೆ, ಈ ವರ್ಷದಲ್ಲಿ ಹೆಚ್ಚು ಆದಾಯವುಂಟಾಗುವುದು ಸಾಹಿತಿಗಳಿಗೆ ಈ ವರ್ಷದಲ್ಲಿ ಹೆಚ್ಚಿನ ಆದಾಯವುಂಟು ಒಳ್ಳೆಯ ಕೀರ್ತಿ ಪ್ರತಿಷ್ಠೆಗಳುಂಟು

**ಮೀನ** (ಪೂ ಭಾ -4, ಉ ಭಾ, ರೇವತಿ)· ಈ ರಾಶಿಯವರಿಗೆ ಎರಡನೆಯ ಸ್ಥಾನದಲ್ಲಿ ಶನಿ ಸಂಚಾರದಿಂದಾಗಿ ಸಪ್ತಮ ಶನಿ ಕುಟುಂಬದಲ್ಲಿ ಸಂತೋಷವಿರದು. ವೃತ್ತಿ ವ್ಯಾಪಾರಗಳಲ್ಲಿ ಕಷ್ಟ, ನೋವು. ಕುಟುಂಬದಲ್ಲಿ ಉಂಟಾಗುವ ಕಲಹಗಳಿಂದ ಕೋರ್ಟ್‌ಗೆ ಹೋಗಬೇಕಾಗುವುದು ವಿವಾಹಾದಿ ಶುಭಕಾರ್ಯಗಳಿಗೆ ಆತಂಕಗಳುಂಟಾಗುವುವು. ಅನಾರೋಗ್ಯವುಂಟಾಗುವುದು ನಯನದಲ್ಲಿ, ಮುಖದಲ್ಲಿ ವ್ಯಾಧಿ ಸಂಭವ ಮಕ್ಕಳ ಆರೋಗ್ಯದಲ್ಲಿ ಲೋಪ ಕಂಡುಬರುತ್ತದೆ ಇದರಿಂದಾಗಿ ಮನಃಶಾಂತಿ ಕಡಮೆಯಾಗುತ್ತದೆ ವ್ಯರ್ಥ ವೆಚ್ಚಗಳುಂಟಾಗುವುವು. ನಿದ್ದೆ ಕಡಮೆ ಒಳ್ಳೆಯ ಮಾತುಗಳಿಗೂ ಕ್ಷಾಮ ಏನೇ ಮಾಡಿದರೂ ಎಲ್ಲರಿಗೂ ತಪ್ಪಾಗಿ ಕಂಡುಬರುತ್ತದೆ ತಮ್ಮಂದಿರ ಆರೋಗ್ಯ ಕೆಡುತ್ತದೆ ತಂದೆಗೂ ಅನಾರೋಗ್ಯ. ಅವರಿಗೆ ಸಾಲದ ಬಾಧೆ ದೇರೆ ಮಾಡುವ ಕೆಲಸದಲ್ಲಿ ಆದಾಯವಿಲ್ಲ ಮೇ ಕೊನೆಯವರೆಗೆ ಗುರುವು ಜನ್ಮಸ್ಥಾನದಲ್ಲಿ ನಡೆಯುವನು ಆಗ ವಿಪರೀತ ನಷ್ಟವುಂಟಾಗುವುದು ಹಲವರಿಗೆ ವೃತ್ತಿ ಉದ್ಯೋಗಗಳಲ್ಲಿ ತೊಂದರೆಗಳುಂಟಾಗುವುವು. ಮೇ ತಿಂಗಳ ಕೊನೆಯಿಂದ ಗುರುವು ಎರಡನೇ ಸ್ಥಾನದಲ್ಲಿ ನಡೆಯುವುದರಿಂದಾಗಿಯೂ, ಕೇತುವು ಹನ್ನೊಂದನೆಯ ಸ್ಥಾನದಲ್ಲಿ ನಡೆಯುವುದರಿಂದಲೂ, ಎಲ್ಲ ರೀತಿಯ ಶ್ರೇಯಸ್ಸು ಉಂಟಾಗುವುದು, ಧನಾದಾಯ ಹೆಚ್ಚಾಗುವುದು ಶುಭಕಾರ್ಯಗಳು ನಡೆಯುತ್ತವೆ ಉದ್ಯೋಗದಲ್ಲಿಯೂ ವೃತ್ತಿಯಲ್ಲಿಯೂ ಧನಾದಾಯವುಂಟು ಸತಿಪತಿಯರಲ್ಲಿ ಅನ್ಯೋನ್ಯತೆ ಹೆಚ್ಚುವುದು ವಿವಾಹಾದಿ ಶುಭಕಾರ್ಯಗಳು ತ್ವರೆಯಿಂದ ನಡೆಯುತ್ತವೆ ಕಚೇರಿಯಲ್ಲಿ ವರ್ಗಾವಣೆ ಪದೋನ್ನತಿ ದೊರೆಯುವುವು. ಹೊಸ ಕಾರ್ಯಗಳಿಂದ ಧನಾದಾಯ ಹೆಚ್ಚುವುದು



# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ

ಆಂಗ್ಲ ಮೂಲ - ಡಾ|| ಎಸ್. ರಮೇಶನ್.

ಕನ್ನಡಾನುವಾದ - ಬಿ. ಎನ್. ಶ್ರೀನಿವಾಸನ್.

(ಮುಂದುವರೆದಿದೆ)

## 15. ನಂದನ ವನಗಳು

ಶ್ರೀ ವೆಂಕಟೇಶ್ವರಸ್ವಾಮಿಯ ಆಲಯದಲ್ಲಿ ನಡೆಯುವ ನಿತ್ಯಪೂಜೆ, ಉತ್ಸವಾದಿಗಳಲ್ಲಿ ಸ್ವಾಮಿಯ ಅಲಂಕಾರಕ್ಕೆ ಅತಿ ಮುಖ್ಯವಾಗಿ ಬಳಸದೇಕಾಗಿ ಬರುವ ಪುಷ್ಪಗಳ ಒಟ್ಟು ಉತ್ಪಾದನೆಯ ಕೊರತೆಯನ್ನು ಬಹುಮಂದಿ ಭಕ್ತರು ಕಂಡುಕೊಂಡರು ನಿರಂತರವಾಗಿ ಹೂವುಗಳ ಸರಬರಾಜು ಮಾಡುವಲ್ಲಿರುವ ತೊಂದರೆಗಳನ್ನು ಮನಗಂಡ ಭಕ್ತರು, ತಾವೇ ಪುಷ್ಪವಾಟಿಕೆಗಳನ್ನು ನಂದನವನಗಳನ್ನು ಬೆಳೆಸಿ, ಬೆಳೆದ ಹೂವುಗಳನ್ನು ಆಲಯಕ್ಕೆ ನೀಡುವಂತಹ ಏರ್ಪಾಡು ಮಾಡಿದರು ಪ್ರತಿಯೊಂದು ನಂದನವನಕ್ಕೂ ಒಬ್ಬ ಮೇಲ್ವಿಚಾರಕನಿದ್ದು ಆತ ಮಾಲಿಗಳಿಂದ ಕೆಲಸವನ್ನು ತೆಗೆದುಕೊಳ್ಳುತ್ತಿದ್ದ ಕೆಲಸಗಾರರಿಗೆ ಅವರ ಕೆಲಸಕ್ಕಾಗಿ ಸಾಧಾರಣವಾಗಿ ತಿಂಗಳಿಗೆ ಮೂರರಿಂದ ಆರು ಪಣಂಗಳ ವರೆಗೆ ಸಂಭಾವನೆ ನೀಡಲಾಗುತ್ತಿದ್ದಿತು ಮೇಲು ವಿಚಾರಕರ್ತರ ಕೆಲಸವು ವಿನಾಸಂಭಾವನೆಯ ಗೌರವ ಕೈಂಕರ್ಯವಾಗಿದ್ದಂತೆ ತೋರುವುದು

ಹಲವಾರು ಬಾರಿ ಭಕ್ತರು ತಮ್ಮ ನಂದನ ವನಗಳಲ್ಲಿ ಮಂಟಪಗಳನ್ನೂ ನಿರ್ಮಿಸಿ, ದೇವಸ್ಥಾನದ ಶ್ರೀ ಭಂಡಾರಕ್ಕೆ ಧನಸಹಿತವಾಗಿಯೋ, ಅಥವಾ ತಮ್ಮ ನಂದನವನದ ಉತ್ಪಾದನೆಯನ್ನೂ ಮಂಟಪದೊಡನೆಯೇ ಒಪ್ಪಿಸಿಬಿಡುತ್ತಿದ್ದರು. ಆಗ ದೇವಸ್ಥಾನದವರೇ ಈ ನಂದನವನಗಳನ್ನು ನೋಡಿಕೊಂಡು, ಅಲ್ಲಿ ಕೆಲಸಮಾಡುವವರಿಗೆ ಜೀವಿಕೆಯನ್ನು ನೀಡುವ ಅಥವಾ ಸಂಬಳಗಳನ್ನು ಏರ್ಪಾಡು ಮಾಡಿ, ಆಲಯದ ಅನ್ನಪ್ರಸಾದಗಳಲ್ಲಿ ಒಂದು ಪಾಲು ದಿನವೂ ಅವರಿಗೆ ಸಿಗುವಂತೆ ಏರ್ಪಡಿಸಿ, ಆಲಯಕ್ಕೆ ನಿರಂತರವಾಗಿ ಹೂವುಗಳ ಸರಬರಾಜು ಆಗುವಂತೆ ನೋಡಿಕೊಳ್ಳದೇಕಾಗಿದ್ದಿತ್ತು ಇವುಗಳಲ್ಲಿನ ಅತಿಹೆಚ್ಚು ನಂದನವನಗಳು ಶಾತ್ತಾದ ಶ್ರೀವೈಷ್ಣವರಿಂದ ನೋಡಿಕೊಳ್ಳಲ್ಪಟ್ಟವೆಂದು ತೋರುತ್ತದೆ ಇಂದಿಗೂ ಅವರೇ ದಾಸ ನಂಬಿಗಳೆಂಬುದಾಗಿ, ತಿರುಮಲೆಯ ಆಲಯದ ಹೂವಾಡಿಗರಾಗಿ ಸ್ವಾಮಿಗೆ ಪುಷ್ಪಕೈಂಕರ್ಯ ಸಲ್ಲಿಸುತ್ತಿರುವರು (197, 200 ತಿತಿ) ಕ್ರಿಶ 1300 ರಿಂದಲೇ (125 ಜಿಟಿ) ನಂದನವನಗಳನ್ನು ಬೆಳೆಸುವ ಸಂಪ್ರದಾಯ ಆರಂಭವಾಗಿದ್ದರೂ, 14 ನೇ ಶತಮಾನದ ದ್ವಿತೀಯಾರ್ಧದಲ್ಲಿಯೂ 15 ನೇ ಶತಮಾನದಲ್ಲಿಯೂ ಕಂಡುಬರುವ ಬಹುತೇಕ ಶಾಸನಗಳ ಹೇಳಿಕೆಯಂತೆ ಅನೇಕವಾದ ಈ ನಂದನವನಗಳನ್ನು ಹೆಚ್ಚು ವ್ಯವಸ್ಥಿತವಾಗಿ ನೋಡಿಕೊಂಡಿದ್ದರೂ ಸಹ ಪೂಜಾದಿ ಉತ್ಸವ ಕಾರ್ಯಗಳಿಗೆ ಹೂವುಗಳ ಕೊರತೆಯನ್ನು ನಿವಾರಿಸುವಷ್ಟು ಹೆಚ್ಚಾಗಿರಲಿಲ್ಲ ಸಾಳುವ ನರಸಿಂಹರಾಯ ಮಹಾರಾಯ ಒಡೆಯರ ಹೆಸರಿನಲ್ಲಿ, ಅವನ ದಂಡನಾಯಕನಾದ ಮುಖಪ್ಪಲಂ ನಾಗಮ ನಾಯಕನು ಒಂದು ಪೂಜೆಯನ್ನು ಏರ್ಪಡಿಸಿ, ತನ್ನ ಜಹಗೀರು ಗ್ರಾಮವಾದ ತಿರಡಂಪಾಡಿಯನ್ನು ತಿರುವಿಡ್ಡೈಯಾಟ್ಟಂ ತಿರುಪ್ಪಣಿಪೂರಂ ಆಗಿ ಆಲಯಕ್ಕೆ ಒಪ್ಪಿಸಿದಾಗ, ಇದರ ಪ್ರತಿಯಾಗಿ ಆಲಯದ ಲೋಕೋಪಯೋಗಿ ಇಲಾಖೆಯ ಮೇಲ್ವಿಚಾರಕನಾದ ತಿರುಪ್ಪಣಿ ಪಿಳ್ಳೈ (ಶ್ರೀ ಕಾರ್ಯನಿರ್ವಾಹಕ) ಸ್ವಾಮಿಗೆ ನೀಡದೇಕಾದ ಹೂವಿನ ಹಾರಗಳನ್ನು ಸರಬರಾಜು ಮಾಡುವ ಜವಾಬ್ದಾರಿಯನ್ನು ಹೊತ್ತುಕೊಂಡನು. (243 ತಿತಿ) ಈ ದಾಖಲೆಯ ವೈಶಿಷ್ಟ್ಯವೆಂದರೆ ಒಬ್ಬ ದಾನಿಯ ಪರವಾಗಿ ಆಲಯದ ಅಧಿಕಾರಿಗಳು ಪುಷ್ಪಗಳನ್ನು ಸರಬರಾಜು ಮಾಡುವ ಹೊಣೆ ಹೊರುವುದು ಹಾಗೂ ಆ ಕೆಲಸಕ್ಕಾಗಿ ದಾನಿಯು ಒಂದು ಗ್ರಾಮವನ್ನು ದಾನ ಮಾಡುವಿಕೆಯೂ ಆಗಿದೆ

ಆಲಯದ ನಂದನವನಗಳಲ್ಲಿಯೂ ಕೊಳಗಳಲ್ಲಿಯೂ ಬೆಳೆಯುತ್ತಿದ್ದ ಹೂವುಗಳಲ್ಲಿ ಸೆಂಕೊಳನೀರಿನಲ್ಲಿ (ಕೆಂಪುನೀರು ಕೆರೆ) ಬೆಳೆಯುವ ಕೆಂದಾವರೆಗಳ ವಿಶೇಷ ಉಲ್ಲೇಖವಿದ್ದು ಇದರ ಬೆಳೆ ತೆಗೆಯಲು ಪ್ರತ್ಯೇಕ ಏರ್ಪಾಡುಮಾಡಿದಂತೆ ಕಂಡುಬರುತ್ತದೆ (125 ಜಿಟಿ) (53, 153 ತಿತಿ) ನಂದನವನಗಳಲ್ಲಿ ಸುಗಂಧ ಬೀರುವ ಮೂಲಿಕೆಗಳನ್ನು ಲತಾಕುಸುಮಗಳನ್ನು - ಮರುಗ, ದವನ, ತುಲಸಿ ಮೊದಲಾದವುಗಳನ್ನೂ -(56-ಎ ತಿತಿ) ದೇವರ ಪೂಜೆಯಲ್ಲಿ ಬಳಸಲು ಬೆಳೆಯಲಾಗುತ್ತಿತ್ತು

## 16. ದೇವದಾನದ ಗ್ರಾಮಗಳು ಹಾಗೂ ಭೂಮಿಕಾಣಿ

ಹಿಂದೂ ರಾಜರೂ ಹಾಗೂ ಅವರುಗಳ ಮನ್ನೆಯ ಮಂಡಲಿಕರೂ ಆಲಯಗಳನ್ನು ಯಾವ ರೀತಿಯಲ್ಲಿ ಅತಿ ಹೆಚ್ಚು ಗೌರವಾದರಗಳಿಂದ ಕಂಡರೆಂಬುದನ್ನು ಆಲಯಗಳ ನಿತ್ಯ ಪೂಜಾದಿ ಉತ್ಸವಗಳಿಗೂ, ಜೀರ್ಣೋದ್ಧಾರಕ್ಕೂ ಅವರುಗಳು ನೀಡಿದ ದಾನದತ್ತಿಗಳೂ, ಸೇವೆ ಕೈಂಕರ್ಯಗಳೂ ಸಾಕಷ್ಟು ವಿವರವಾಗಿ ತಿಳಿಸುತ್ತವೆ ಬಹುತೇಕ ಕಾಣಿಕೆಗಳು ಭೂಮಿಕಾಣಿ, ಗ್ರಾಮಗಳಾಗಿದ್ದು, ಸಾಧಾರಣವಾಗಿ ಸರ್ವಮಾನ್ಯವಾಗುತ್ತಿದ್ದವು. (ಎಲ್ಲ ರೀತಿಯ ಆದಾಯದೊಡನೆ ಸೇರಿದ ದಾನ,) ತಿರುವೆಂಕಟ ಕೋಟ್ಟಂ ಪ್ರಾಂತ್ಯದಲ್ಲಿನ ಎರಡು ಉಪವಿಭಾಗಗಳಾದ ವೈಕುಂಠ ವಲನಾಡು ಹಾಗೂ ಚಂದ್ರಗಿರಿ ರಾಜ್ಯದ ತಿರುಕ್ಕುಡವೂರನಾಡುಗಳಲ್ಲಿ ಈ ದೇವಮಾನ್ಯದ ಗ್ರಾಮಗಳಲ್ಲಿ ಹೆಚ್ಚಿನವು (ಸುಮಾರು ನೂರೈವತ್ತಕ್ಕೂ ಹೆಚ್ಚಿನವು) ವಿಜಯನಗರ ರಾಜ್ಯದ ಕಾಲಕ್ಕಿಂತ ಪೂರ್ವದಲ್ಲಿ ಕೆಲವೇ ಗ್ರಾಮಗಳು ಆಲಯದ ಒಡೆತನಕ್ಕೆ ಬಂದವುಗಳಾಗಿದ್ದರೆ, ವಿಜಯನಗರ ಕಾಲದಲ್ಲಿ ಅತ್ಯಂತ ಹೆಚ್ಚಿನ ಗ್ರಾಮಗಳನ್ನು ಆಲಯಕ್ಕೆ ಒಪ್ಪಿಸಲಾಯಿತು ವಿಜಯನಗರದ ಆಡಳಿತ ಕಾಲದಲ್ಲಿ ಆರಂಭಿಸಲಾದ ನಿತ್ಯನೈವೇದ್ಯ ನಿತ್ಯಪೂಜೆ, ಉತ್ಸವ, ಮೆರವಣಿಗೆ, ನಂದನ ವನಗಳು, ರಾಮಾನುಜಕೂಟಗಳು ಹೆಚ್ಚಿಗೆ ಆದಾಯ ಮೂಲವನ್ನು ಅಪೇಕ್ಷಿಸುವಂತಹವೇ ಅಲ್ಲದೆ, ಅವುಗಳ ನಿತ್ಯ ನಿರಂತರತೆಗಾಗಿ ವರ್ಷವರ್ಷವೂ ಆದಾಯ ಬರುವಂತಹ ಭೂಮಿಕಾಣಿಯಾಗಲೀ, ಹಳ್ಳಿಗಳ ಆದಾಯವನ್ನಾಗಲೀ ಮಾಸಲಿಡಲೇದೇಕಾಗಿ ಬಂದು

## ಆಲಯ ಶಾಸನಗಳು

ದಾನಿಗಳ ಅಪೇಕ್ಷಿತ ಪೂಜೆ, ನಿವೇದನೆ, ಉತ್ಸವಗಳನ್ನು ಶಾಶ್ವತವಾಗಿ ನಡೆಸಲು ಸಾಧ್ಯವಾಗುವಂತಾದದ್ದು - ಹೀಗೆ ಗ್ರಾಮಗಳ ದಾನಕ್ಕೆ ಕಾರಣವಾಯಿತು

ತಿ ತಿ 18, 19 ಶಾಸನಗಳು ಹೇಳುವಂತೆ ಮಣವಾಳ ಪ್ಪೆರುಮಾಳರನ್ನು ಉತ್ಸವ ಮೂರ್ತಿಯಾಗಿ ಸ್ಥಾಪಿಸಿದ ಪಲ್ಲವ ರಾಣಿ ಸಾಮವೈ ಅದರ ಪೂಜೆ ನಿವೇದನಗಳಿಗಾಗಿ ತಿರುಸುಖನೂರು (ತಿರುಚಾನೂರು) ಪಂಚಾಯತಿಗೆ ಸೇರಿದ 7000 ಕುಳಿ (ಗುಂಟೆ) ಭೂಮಿಯನ್ನು ಕೊಂಡುಕೊಂಡು ಇಡೀ ಭೂಮಿಯನ್ನು ಆಲಯದ ವಶಕ್ಕೆ ಒಪ್ಪಿಸಿದುದೇ ಇಂತಹ ದಾನಗಳಲ್ಲಿ ದೊರಕಿರುವ ಪ್ರದಮ ದಾಖಲೆಯಾಗಿದೆ

ಹದಿಮೂರು ಹದಿನಾಲ್ಕನೇ ಶತಮಾನದಲ್ಲಿದ್ದ ಸ್ಥಳೀಯ ಪ್ರಭಾವಶಾಲಿ ಆಡಳಿತಗಾರರಾದ ಗಂಡಗೊಪಾಲರುಗಳು, ಯಾದವರಾಯರುಗಳಿಂದ ಕಾಲದಿಂದ ಕಾಲಕ್ಕೆ ಹಲವು ಜಮೀನು, ಹಳ್ಳಿಗಳು ದಾನವಾಗಿ ಸೇರಿದವು. ವಿಜಯಗಂಡ ಗೋಪಾಲನ ಕಾಲದಲ್ಲಿ ಕನಿಷ್ಠವಾಗಿ ಇಂತಹ ಒಂದಾದರೂ ದಾನ ನಡೆದದ್ದನ್ನು ಕಾಣಬಹುದು (127 - ಜಿ ಟಿ ) ಯಾದವರಾಯರುಗಳು ಆಲಯದ ಉತ್ಸವಗಳಲ್ಲಿ ತೀವ್ರವಾದ ಆಸಕ್ತಿ ತೋರಿಸುತ್ತ ಭೂಮಿ ಕಾಣಿಯನ್ನು ನೀಡಿದರು ಪ್ರಭೂತ ರಾಜಾಶ್ರಯ, ಚಂದ್ರಕುಲತಿಲಕ, ಚಾಲುಕ್ಯ ನಾರಾಯಣ, ಶ್ರೀಮದ್ ಭುಜಬಲ - ಮೊದಲಾದ ಬಿರುದಾಂಕಿತನಾದ ತಿರುಕ್ಕಾಳತ್ತಿದೇವ ಯಾದವ ರಾಯನ ಆಳ್ವಿಕೆಯ ಕಾಲದಲ್ಲಿ, ಕೆಲವು ಭೂಮಿಗಳು ಮಾತ್ರವೇ ದೇವಸ್ಥಾನಕ್ಕೆ ಸೇರಿದ್ದ ಕುಡವೂರು ಗ್ರಾಮವು ಅವಿಲಾಲಗ್ರಾಮದ ಪಂಚಾಯತಿಯ ಸ್ಥಾನತ್ತಾರರ ಶಿಫಾರಸಿನ ಮೇಲೆ ಪೂರ್ತಿಯಾಗಿ ದೇವಸ್ಥಾನಕ್ಕೆ ದೇವದಾನದ ಗ್ರಾಮವಾಗಿ ಸೇರಿಹೋಯಿತು (170 ತಿ ತಿ) ಶ್ರೀ ವೆಂಕಟೇಶ್ವರಸ್ವಾಮಿಗೆ ನೈವೇದ್ಯಕ್ಕಾಗಿ ತಿರುಕ್ಕುಡವೂರು ಗ್ರಾಮದ ಹಲವು ಭಾಗದ ಭೂಮಿಯನ್ನು ವೀರ ರಾಕ್ಷಸ ಯಾದವರಾಯನು ದಾನವಾಗಿ ನೀಡಿದನು (293 ತಿ.ತಿ.) ವೀರನರಸಿಂಗ ಯಾದವರಾಯನ ಆಳ್ವಿಕೆಯ 30 ನೇ ವರ್ಷದಲ್ಲಿ ಆತನ ರಾಣಿಯು, ತಾನು ಆಣಿಮಾಸದಲ್ಲಿ ಶ್ರೀ ಗೋವಿಂದರಾಜಸ್ವಾಮಿಯ ಸೇವೆಯಲ್ಲಿ ಆರಂಭಿಸಿದ ಉತ್ಸವವನ್ನು ಶಾಶ್ವತವಾಗಿ ನಡೆಸಲು ವೆಚ್ಚಗಳನ್ನು ಭರಿಸಲೆಂದು, ಆ ಮೊದಲೇ ಅರ್ಧ ಆದಾಯವನ್ನು ದೇವಾದಾಯವಾಗಿ ಪಡೆದಿದ್ದ ಪೈಂಡಿಪಲ್ಲಿ ಗ್ರಾಮದ ಮಿಕ್ಕ ಅರ್ಧವನ್ನೂ ಸರ್ವರೀತಿಯ ತೆರಿಗೆಗಳಿಂದ ಮುಕ್ತಗೊಳಿಸಿ, ಆಲಯಕ್ಕೆ ನೀಡಿದಳು (111 ಜಿ ಟಿ )

ವಿಜಯನಗರ ಆಳ್ವಿಕೆಯ ಕಾಲಕ್ಕೆ ಬಂದರೆ ಪ್ರಭವ ವರ್ಷದ ಮಾಸಿ ತಿಂಗಳಿನಲ್ಲಿ ಆರಂಭಿಸಲಾದ ತಿರುಮಲೆಯ ಆಲಯದ ಉತ್ಸವವನ್ನು ನಡೆಸಲು ಮೂರನೇ ಹರಿಹರನು ಶಕವರ್ಷ 1310 ರಲ್ಲಿ ಪುಂಗೋಡು ಗ್ರಾಮಾದಾಯವನ್ನು ನೀಡಿದನೆಂಬುದನ್ನು ನೋಡಬಹುದು ಈ ಗ್ರಾಮವನ್ನು ದೇವಸ್ಥಾನಕ್ಕೆ ಒಪ್ಪಿಸದೆ ಮುಲ್ಲೈ ತಿರುವೆಂಕಟ ಜೀಯರ್ ಅವರಿಗೆ ಒಪ್ಪಿಸಿ, ಅವರು ವರ್ಷಕ್ಕೆ ಗ್ರಾಮಾದಾಯವಾಗಿ 100 ಪಣಂಗಳನ್ನು ಆಲಯಕ್ಕೆ ನೀಡಬೇಕೆಂದು ನಿರ್ದೇಶಿಸಲಾಗಿದೆ (101, 61 - ತಿ ತಿ ) ಎರಡನೇ ದೇವರಾಯನ ಕಾಲಕ್ಕೆ ಸೇರಿದಂತಹ ಶಕವರ್ಷ 1355 ರಲ್ಲಿ ಆಲಯವು ಸಿದ್ಧಕುಟ್ಟೈ ಅಥವಾ ಶ್ರೀನಿವಾಸ ಪುರದ (ತಿರುಪತಿಯ ಪಶ್ಚಿಮಕ್ಕೆ ಇದ್ದ ಹಳ್ಳಿ) ಅರ್ಧ ಆದಾಯವನ್ನು ಪಡೆಯುವಂತಾಗಿ ಅದೇ ವರ್ಷ ವೇದಪಾರಾಯಣ ಮಾಡುವ ಅದೇ ಗ್ರಾಮದ 24 ಮಂದಿ ಮಹಾಜನದ - ಪಂಡಿತರ ಜೀವನಾಧಾರವಾಗಿ ಅದನ್ನು ಒಪ್ಪಿಸಿದ್ದನ್ನು ಹಿಂದೆಯೇ ಹೇಳಲಾಗಿದೆ (89, 149, 161, 162 - ತಿ ತಿ ) ಇದಕ್ಕೆ ಹಿಂದೆ ಶಕವರ್ಷ 1351 ರಲ್ಲಿಯೇ ಎರಡನೇ ದೇವರಾಯನು ತನ್ನ ಹೆಸರಿನಲ್ಲಿ ಶ್ರೀವೆಂಕಟೇಶ್ವರಸ್ವಾಮಿಗೆ ನೈವೇದ್ಯಸಮರ್ಪಣೆ ವೆಚ್ಚವನ್ನು ಭರಿಸಲು ಮೂರು ಗ್ರಾಮಗಳನ್ನು ನೀಡಿದ್ದನು ಆತನ ಸಚಿವನಾದ ಮಲ್ಲನನು ದೇವದಾನದ ಎರಡು ಹಳ್ಳಿಗಳಲ್ಲಿನ ದೇಸಾಯದ ನೀರಾವರಿ ವ್ಯವಸ್ಥೆಯನ್ನು ಅಭಿವೃದ್ಧಿಗೊಳಿಸುವುದರ ಮೂಲಕ ಆಲಯದ ಆದಾಯವನ್ನು ಹೆಚ್ಚಿಸಿದನು (187 - ತಿ ತಿ )

ಪರಿಗಣಿಸಲೇಬೇಕಾದ ನಂತರದ ದೊರೆಯೆಂದರೆ ಶ್ರೀಕೃಷ್ಣದೇವರಾಯ ಸಾಳುವ ನರಸಿಂಹನಂತೆಯೇ ಈತನೂ ಶ್ರೀ ವೆಂಕಟೇಶ್ವರಸ್ವಾಮಿಯನ್ನು ತನ್ನ ಅಂತರಂಗದ ದೈವವನ್ನಾಗಿ ನಂಬಿಕೊಂಡಿದ್ದ ಈತ ಆಗಾಗ ತಿರುಮಲೆಗೆ ಆಗಮಿಸುವುದರ ಮೂಲಕವೂ, ಗ್ರಾಮಗಳನ್ನು ದಾನ ನೀಡುವುದರಿಂದಲೂ, ಹಲವಾರು ತೆರನಾದ ಬಹುಮೂಲ್ಯ ಆಭರಣಗಳನ್ನು ಸಮರ್ಪಿಸುವುದರ ಮೂಲಕವೂ, ಚಿನ್ನದ ಬೆಳ್ಳಿಯ ಪಾತ್ರೆಗಳನ್ನು ನೀಡುವುದರಿಂದಲೂ ಧನವನ್ನು ನೀಡುವುದರಿಂದಲೂ ತನ್ನ ಭಕ್ತಿಯನ್ನು ದಾಖಲೆಗೊಳಿಸಿದ್ದಾನೆ ತನ್ನ ಪತ್ನಿಯರಾದ ಚಿನ್ನಾಜಿದೇವಿ ತಿರುಮಲದೇವಿಯರೊಡನೆ ಆತ ನೀಡಿದ ಗ್ರಾಮಗಳಲ್ಲಿ ಒಳಮಂಡಲದ ಕಡೈಕುಟ್ಟಿನ್ ಪಡಿ, ತಾಳ್ಲಪಾಕ, ಮುಡಿಯೂರು, ಪಿರಾಟ್ಟಿ ಕುಳತ್ತೂರು, ದಾರತ್ತೂರು, ಪೂರಮಂಡಲದ ತುರ್ಯೆಯೂರುಗಳೂ ಸೇರಿದ್ದವು

ಅಚ್ಯುತರಾಯನ ಆಳ್ವಿಕೆಯ ಕಾಲದಲ್ಲಿ ಆತನ ರಾಣಿಯಾದ ವರದಾಜೀದೇವಿಯಮ್ಮ ಶಕವರ್ಷ 1436 ರಲ್ಲಿ ಆರು ಹಳ್ಳಿಗಳನ್ನು ಆಲಯಕ್ಕೆ ದಾನ ಮಾಡಿದ್ದಾಳೆ ಅವುಗಳೆಂದರೆ ಗಂಡಿಕೋಟೆ

* * * * * * * * * * * * * * * * * * * * * * * * * * * * * *

ವಿಜಯನಗರದ ರಾಜರಲ್ಲಿ ಸಾಳುವ ನರಸಿಂಹನು ಆಲಯಕ್ಕೆ ಅತಿ ಹೆಚ್ಚಿನ ಹಳ್ಳಿಗಳ ದಾನ ನೀಡಿದ ಈ ದಾನದ ಪಟ್ಟಿಯನ್ನು ಹೀಗೆ ಸಿದ್ಧಪಡಿಸಬಹುದು

| | | |
|---|---|---|
| 1 ಸರ್ವಮಾನ್ಯವಾಗಿ ಆಲಿಪುರಂ ಗ್ರಾಮ | ಶಕ 1378 | - 3 - ತಿ ತಿ. |
| 2 ಅಗರ ಅಥವಾ ಬ್ರಾಹ್ಮಣ ಅಗ್ರಹಾರ ಮುರುಕ್ಕಂಭಟ್ಟು | ಶಕ 1379 | - 54 - ತಿ ತಿ |
| 3 ವಂಜಿಪಾಕಂ, ಮಲ್ಲಮಲ್ಲೈ, ಸೆರುಲಕ್ಕೂರ್, ಭೂಮಪುರಂ, ಚಂದ್ರಗಿರಿ ರಾಜ್ಯದ ಕೀಳ್‌ಪದ್ಯೆನಾಡುವಿನಲ್ಲಿದ್ದ ನಾಲ್ಕು ಹಳ್ಳಿಗಳು, ಪದ್ಮೆವೀಟ್ಟುಸೀಮೆಯ ವಳ್ಳೆಮಂಕೊಂಡನ್ | ಶಕ 1389 | - 66 - ತಿ ತಿ |
| 4 ಮಂಗೋಡು - ವೇಳದ ಹಾಗೂ ಮಣವೂರು | ಶಕ 1389 | - 8 - ಜಿ ಟಿ |
| 5 ದೊಮ್ಮರ ಪಟ್ಟಿ (ಪದ್ಮೆವೀಡುರಾಜ್ಯ) | ಶಕ 1395 | - 187 - ತಿ ತಿ |
| 6 ದುರ್ಗಸಮುದ್ರ | ಶಕ 1404 | - 248 - ತಿ ತಿ |

- ದುರ್ಗಸಮುದ್ರವನ್ನು ನಂತರದ ಕಾಲದಲ್ಲಿ ದೇವದಾನಗ್ರಾಮದಿಂದ ತಿರುಪ್ಪಣಿಪುರವಾಗಿ ಎಂದರೆ ಆಲಯದ ಗೋಪುರ ಇತ್ಯಾದಿಗಳ ಮರಮತ್ತಿನ ಲೋಕೋಪಯೋಗಿ ಕೆಲಸಗಳ ಗ್ರಾಮವಾಗಿರಿಸಲಾಯಿತು

* * * * * * * * * * * * * * * * * * * * * * * * * * * * * *

ಸೀಮೆಯ ಚಿನ್ನ ಮಾದಪ್ಪಲೂರು, ಮುತ್ತುಕೂರು, ಕೊಂಡವಿ ಸೀಮೆಯ ಪೊಲಿವ, ವಲ್ಲಿ, ಮಂಗ ಮೂರು ಹಾಗೂ ಪೈಂಡಿಪಲ್ಲಿ, ನಾರಾಯಣ ಪುರ ಪ್ಪರು ಅಚ್ಯುತರಾಯನ ಸೇನಾಧಿಪತಿಯಾದ ವೀರಪ್ಪಣ್ಣನು ಹಲವಾರು ಸಂದರ್ಭಗಳಲ್ಲಿ ಭೂಮಿ, ಗ್ರಾಮ, ನಗದು ಸಮರ್ಪಣೆಗಳನ್ನು ರಾಜನ ಪರ ವಾಗಿ ಮಾಡಿದ್ದಾನೆ ಉದಾ ಶಕ 1458 ರಲ್ಲಿ ನೀಡಿದ ಗಂಡಿಕೋಟೆ ಸೀಮೆಯ ಪಚ್ಚಿಕಲಪಾಡು ಗ್ರಾಮದಾನ ಗೊಲ್ಲಪಲ್ಲಿಯು, ಇದೇ ಕಾಲದಲ್ಲಿ, ತಿರುಮಲಜೋಸ್ಯರ ಮಗನಾದ ಯಂದಲೂರೂ ವೆಂಕಟಾದ್ರಿಯಯ್ಯನ್ ನೀಡಿದ ದಾನವಾಗಿದ್ದಿತು

ಸದಾಶಿವರಾಯನ ಆಳ್ವಿಕೆಯ ಕಾಲದಲ್ಲಿ ಆತನೇ ರವಾಗಿ ದಾನ ನೀಡಿದ ಉಲ್ಲೇಖಗಳಿಲ್ಲವಾದರೂ ಆತನ ಸೇನಾಧಿಪತಿಗಳು ಆರಕ್ಕಿಂತಲೂ ಹೆಚ್ಚು ಹಳ್ಳಿ ಗಳನ್ನು ದಾನಮಾಡಿದ್ದಾರೆ ಈ ಕಾಲದಲ್ಲಿ ಅಳಿಯ ರಾಮರಾಯನ ಪದುಪ್ಪಟ್ಟಿಗ್ರಾಮದ ದಾನವು ಸದಾ ಶಿವನ ಪ್ರಧಾನಿಗಳನ್ನು ಉತ್ತೇಜಿಸಿದ್ದಿರದೇಕು ಶಕ ವರ್ಷ 1479 ರಲ್ಲಿ ತಿರುವಾಂಕೂರಿನ ರಾಜನು ವಿರ ಲರಾಜಯ್ಯನ ಕೀರ್ತಿ ದೆಳಗಲೆಂದು ತಾಮ್ರಪರ್ಣಿ ನದಿಯ ದಡದಲ್ಲಿದ್ದಂತಹ ಕುಲಯಾಪಟ್ಟಂ ಗ್ರಾಮ ವನ್ನು ದಾನ ನೀಡಿದನು (ಜಿ.ಟಿ 147) ವೆಂಕ ಟಪತಿರಾಯನ ಆಳ್ವಿಕೆಯ ಕಾಲದಲ್ಲಿ ಶಕ 1528 ರಲ್ಲಿ ಆತನ ಸೇನಾಪತಿ ಹನುಮಯ್ಯ ಅಲಿಯಾಸ್ ಅಣ್ಣಂಗರ್ ಚಕ್ರವರ್ತಿ ವೆಂಕಟಪತಿರಾಯ ಹಾಗೂ ಮಹಾರಾಣಿ ಕೃಷ್ಣಾಜಿ ಅಮ್ಮನವರ ಕೀರ್ತಿ ಶಾಶ್ವತ ವಾಗಿರುವಂತೆ 'ಅಣ್ಣಂಗರ್ ಪಾಳಯಂ' ಗ್ರಾಮದಲ್ಲಿ ಮೂರು ನೀರಾವರೀ ಕಾಲುವೆಗಳನ್ನು ತೋಡಿಸಿ ಗ್ರಾಮವನ್ನು ಆಲಯಕ್ಕೆ ದಾನ ಮಾಡಿದನು

ಆಲಯದಲ್ಲಿ ಆರಂಭವಾದ ಉತ್ಸವ ಸೇವೆ ನಿವೇದನಗಳು ನಿರಂತರವಾಗಿ ನಡೆಯುವಿಕೆಯು, ಅದರ ಉದ್ದೇಶಕ್ಕಾಗಿ ನೀಡಲಾದ ಗ್ರಾಮಗಳಲ್ಲಿನ ನೀರಾವರೀ ವ್ಯವಸ್ಥೆಯನ್ನು ಅವಲಂಬಿಸಿರುತ್ತಿದ್ದವು ಹಾಗಾಗಿ ಈ ನೀರಾವರೀ ವ್ಯವಸ್ಥೆಯತ್ತ ಹೆಚ್ಚು ಗಮ ನವೀಯುವುದರಿಂದ ಆಲಯದ ಆದಾಯ ನಿರಂತ ರವಾಗಿ, ಉತ್ಸವ ಸೇವೆಗಳು ಹೆಚ್ಚು ಕಾಲ ನಡೆಯು ವಂತಾಗುತ್ತಿದ್ದವು ಇದರಿಂದಾಗಿ ದಾನವಾಗಿ ಬಂದ ಹಳ್ಳಿಗಳಲ್ಲಿನ ನೀರಾವರೀ ಪದ್ಧತಿಯನ್ನು ಎಚ್ಚರಿಕೆ ಯಿಂದ ನೋಡಿಕೊಂಡು, ಸಾಕು ದೇಶಾದ ದುರಸ್ತಿ ಕೆಲಸಗಳನ್ನು ಆಲಯದ ಅಧಿಕಾರಿಗಳು, ದಾನ ನೀಡಿದವರು ನೋಡಿಕೊಳ್ಳುತ್ತಿದ್ದರು ಇದರಿಂದಾಗಿ ಭೂಮಿಯ ಸಾಗುವಳಿ ಮಾಡುವ ದೇಸಾಯಗಾರ ನಿಗೆ - ತಾನು ನೇರವಾಗಿ ಸ್ವತಂತ್ರವಾಗಿ ಹೆಗಲು ನೀಡಲಾಗದ, ಆದರೆ ಇತರರೊಡನೆ ಕೆಲಸದಲ್ಲಿ ಕೈ ಹಾಕಿ ತನ್ನ ವಂತಿಗೆಯನ್ನು ಸಲ್ಲಿಸಬಹುದಾದ ಹಿರಿಯ ಹೊರೆಯ ಭಾರ ಕಡಮೆಯಾಗಿ - ವ್ಯವ ಸಾಯ ಸುಲಭತರವಾಗುವಂತೆ ಆಯಿತು ಇಂತಹ ಸರ್ವತೋಮುಖ ಅಭಿವೃದ್ಧಿಯ ಆಧಾರ ಶಿಲೆಗ ಳಾದ ಪೂಜಾ ಪುರಸ್ಕಾರಗಳಿಗೆ ಎಡೆಮಾಡಿಕೊಟ್ಟ ಆಗಮಗಳ ಶಾಸ್ತ್ರಗಳ ದೂರದೃಷ್ಟಿಯನ್ನು ಅವುಗ ಳನ್ನು ಅನುಸರಿಸಿ ಶಾಶ್ವತ ಸೇವೆಯ ವ್ಯಾಪಕ ವ್ಯವ ಸ್ಥೆಯನ್ನುಂಟುಮಾಡಿದ ಭಕ್ತರ ಸಾಮಾಜಿಕ ಕಾಳಜಿ ಗಳ ಬಗ್ಗೆಯೂ ಮೆಚ್ಚುಗೆ ವ್ಯಕ್ತಪಡಿಸದೇಕಾಗುತ್ತದೆ

## 17. ಸೋಪಾನಮಾರ್ಗ ಅಥವಾ ಮೆಟ್ಟಿಲ ಹಾದಿ

ತಿರುಮಲೆಯ ದೆಟ್ಟದ ಬುಡದಲ್ಲಿನ ಅಲಿಪಿರಿ ಯಲ್ಲಿರುವ ವೆಂಕಟೇಶ್ವರಸ್ವಾಮಿ ಪಾದಗಳ ಕಿರಿಯ ಗುಡಿಯಲ್ಲಿರುವ ಗೋಡೆಯ ಮೇಲೆ 41 ಸಾಲುಗಳ ತೆಲುಗು ಭಾಷೆಯ ಸೀಸಪದ್ಯವು ತೆಲುಗು, ತಮಿಳು, ಗ್ರಂಥ ಲಿಪಿಗಳಲ್ಲಿದ್ದು, ಮಟ್ಲ ತಿರುವೆಂಗಡನಾಥ ಹಾಗೂ ಚೆನ್ನಮಾಂಬರ ಮಗನಾದ ಮಟ್ಲಕುಮಾರ ಅನಂತರಾಜನ ಧರ್ಮಶ್ರದ್ಧೆ, ಶೌರ್ಯಗಳ ವಿವರ ವಾದ ಕೀರ್ತನೆ ಮಾಡುತ್ತದೆ ಶ್ರೀ ವೆಂಕಟಾಚಲಪತಿ ಯನ್ನು ಮೆಚ್ಚಿಸುವಂತಹ ಆತನ ತಿರುಪತಿಯ ಕೈಂಕ ರ್ಯಗಳಲ್ಲಿ ದೆಟ್ಟವನ್ನೇರಲು ನಿರ್ಮಿಸಿದ ಸೋಪಾನ ಮಾರ್ಗವೂ, ಅಗ್ರಗೋಪುರವೂ ಸೇರಿವೆ ಈ ಸೋಪಾನ ಮಾರ್ಗವು ದೆಟ್ಟದ ಬುಡದಿಂದ - ಅಲಿ ಪಿರಿ - ಅಡಿಪ್ಪಡಿಯಿಂದ ಆರಂಭವಾಗುವ ಕಲ್ಲಿನ ಮೆಟ್ಟಿಲ ಹಾದಿಯೇ ಆಗಿರದೇಕು ಇದು ದೆಟ್ಟದ ಮೇಲೇರುತ್ತ ಸರ್ಪದೋಪಾದಿಯಲ್ಲಿ ಹೊರಳಿ ಹೊರಳಿ ಮುಂದಿನ ದೆಟ್ಟದ ನೆತ್ತಿಯ ಗಾಳಿಗೋ ಪುರದವರೆಗೆ ವಿಸ್ತರಿಸುತ್ತದೆ. ಇದನ್ನು ದೂರದವ ರೆಗೆ ಕಾಣಬಹುದು ಮೇಲೆ ಕಂಡುಬರುವ ಗಾಳಿ ಗೋಪುರವೇ ಅಗ್ರಗೋಪುರವಾಗಿರದೇಕು ಈಗ ತಿರುಪತಿಯಿಂದ ತಿರುಮಲೆಗೆ ಹೋಗುವ ಮೆಟ್ಟಿಲ ಹಾದಿ ಇದೊಂದೇ ಆಗಿದೆ ಹೀಗಾಗಿ ಸೋಪಾನ ಮಾರ್ಗವೆಂದರೆ ಮಟ್ಲಕುಮಾರ ಅನಂತರಾಜನು ಅಲಿಪಿರಿಯಿಂದ ಗಾಳಿಗೋಪುರದವರೆಗೆ ನಿರ್ಮಿ ಸಿದ ಮೆಟ್ಟಿಲ ಹಾದಿಯೆಂದೇ ಬಗೆಯಬಹುದು ಇದಕ್ಕೂ ಮೊದಲು ಕಪಿಲತೀರ್ಥದಿಂದ ಗಾಳಿಗೋ ಪುರದವರೆಗೆ ಒಂದು ಸುದೀರ್ಘವಾದ ರಸ್ತೆಯಿದ್ದಿ ತೆಂದು ಹೇಳಲಾಗಿದೆ ಮಟ್ಲಕುಮಾರ ಅನಂತರಾ ಜನ ನಿರ್ಮಾಣವು ಸ್ವಲ್ಪ ಕಡಿದಾದರೂ ಕಪಿಲತೀ ರ್ಥದ ಹಾದಿಯಷ್ಟು ಬಳಸಾಗದೆ ಅಲಿಪಿರಿಯಿಂದಾ ಗಿದ್ದರಿಂದ ನೇರವಾಯಿತು ಹಲಕಾಲ ಎರಡೂ ರಸ್ತೆ ಗಳನ್ನೂ ಜನ ಬಳಸುತ್ತಿದ್ದು ಕ್ರಮೇಣ ಅಲಿಪಿರಿಯ ಮೆಟ್ಟಿಲ ಹಾದಿಯೇ ಹೆಚ್ಚು ಪ್ರಸಿದ್ಧವಾಗಿ ಬಳಕೆಗೆ ಬಂದಿತೆಂದು ತೋರುತ್ತದೆ ಮೆಟ್ಟಿಲ ಮಾರ್ಗವು ಈ ಶಾಸನವನ್ನು ಹಾಕಿಸಿದ ಶಕವರ್ಷ 1550 ರ ಸ್ವಲ್ಪ ಹಿಂದೆ ನಿರ್ಮಾಣವಾಗಿರದೇಕು ಮೇಲಿನ ಆಲಯದವರೆಗಿನ ರಸ್ತೆಯನ್ನು ಹೊಸದಾಗಿ ನಿರ್ಮಿ ಸಲಾಯಿತು ಎಂದು ಹೇಳಲು ಆಗದು ಕಾರಣ ವೆಂದರೆ ಅದಕ್ಕೂ ಮೊದಲು ಸ್ವಾಮಿಯನ್ನು ಆರಾ ಧಿಸಲು ತಿರುಮಲೆಗೆ ಜನರು ಹೋಗಿ ಬರುತ್ತಿದ್ದ ಒಂದು ಹಾದಿ ಇದ್ದಿತೆಂಬುದು ಖಚಿತವಾದ ವಿಷ ಯವಾಗಿ, ಸಾಕಷ್ಟು ಯಾತ್ರಿಕರು ಈ ಹಳೆಯ ಹಾದಿಯಲ್ಲಿ ಓಡಿಯಾಡುತ್ತಿದ್ದರೆಂಬುದು ಸ್ಪಷ್ಟವೇ ಇದೆ ಜೊತೆಗೇ ಶಕವರ್ಷ 1387 ಕ್ಕೆ ಸೇರಿದ ಒಂದು ಶಾಸನವು ಎಂದರೆ ಈ ಮೇಲಿನ ಶಾಸನ ಕ್ಕಿಂತ ಒಂದು ಶತಮಾನ ಹಿಂದಿನದಾದ ಶಾಸನವು ತಿರುಮಲೆಯನ್ನು ತಲುಪುವ ಹಾದಿಯಲ್ಲಿದ್ದ ಮೊಣ ಕಾಲು ಮುರಿ ಎಂಬಲ್ಲಿನ ಮೆಟ್ಟಿಲುಗಳ ಉಲ್ಲೇಖ ವನ್ನು ನೀಡುವುದನ್ನು ನೋಡಬಹುದು ಮೊಣ ಕಾಲು ಮುರಿಯುವಷ್ಟು ಕಡಿದಾದ ಮೆಟ್ಟಿಲು ಎಂದೂ, ಮೊಣಕಾಲಿನವರೆಗೆ ಬರುವಷ್ಟು ಎತ್ತ ರವಾದ ಮೆಟ್ಟಲು ಎಂದೂ ಇಲ್ಲಿ ಅರ್ಥೈಸಲಾಗಿದೆ ಹೀಗಾಗಿ ಮೊದಲಿನಲ್ಲಿಯೂ ಪವಿತ್ರವಾದ ದೆಟ್ಟಕ್ಕೆ ಹೋಗಿ ಬರಲು ಅಲ್ಲಲ್ಲಿ ಕಲ್ಲಿನ ಮೆಟ್ಟಿಲುಗಳಿದ್ದ ಘಟ್ಟಗಳನ್ನು ಶಾಸನಗಳು ಗುರುತಿಸುತ್ತವೆ

## 18. ತಣ್ಣೀರ ಚಪ್ಪರ ನೀರು ನೆರಳು

ತಿರುಮಲೆಯನ್ನು ದರ್ಶಿಸುವ ಯಾತ್ರಿಕರು ತಿರು ಪತಿಯಲ್ಲಿಯೂ ತಿರುಮಲೆಯ ಹಾದಿಯಲ್ಲಿಯೂ ನೀರಿನ ತಂಗುದಾಣಗಳ ಅಗತ್ಯವನ್ನು ಅನುಭವಿಸು ವುದು ಅಲ್ಲಿನ ನೀರಿನ ಕೊರತೆಯಿಂದಾಗಿ ಸ್ವಾಭಾ ವಿಕವಾಗಿದೆ 195 ತಿ ತಿ ಶಾಸನದಲ್ಲಿ 14 ನೇ ಶತಮಾನದಲ್ಲಿ ಸಿಂಗಯ್ಯ ದಂಡನಾಯಕನು ತಿರು ಮಲೆಯಲ್ಲಿ ಮಾಡುವ ಸೇವೆಗಳಿಗಾಗಿ ನೀಡಿದ ದಾನದ ಮೊತ್ತದಲ್ಲಿ, ಆಯಾ ಸೇವೆಯನ್ನು ಮಾಡಿದ ನಂತರ ಉಳಿದ ಹಣವನ್ನು ನೀರಿನ ನೆರಳನ್ನುಂಟು ಮಾಡಲು, ನಂದನವನವನ್ನು ದೆಳೆಸಲು ದೇವಸ್ಥಾ ನದ ಅಧಿಕಾರಿಗಳಿಗೆ ಸ್ವಾತಂತ್ರ್ಯವಿದ್ದ ವಿಷಯವನ್ನು ಹೇಳಲಾಗಿದೆ 53 ತಿ ತಿ ಶಾಸನದಲ್ಲಿ ತಿರುಮ ಲೆಯ ಹಾದಿಯ ಮೊಣಕಾಲು ಮುರಿ ಸಮಾಪ ದಲ್ಲಿ ತಾನು ನಿರ್ಮಿಸಿದ ಮಂಟಪದಲ್ಲಿ ನೀರಿನ ಸರ ಬರಾಜು ಮಾಡಲು - ಅದನ್ನು ನೋಡಿಕೊಳ್ಳಲು ಸಾಳುವ ರಾಜನ ಮಗ ಸಾಳುವ ಪರ್ವತರಾಜನು ಏರ್ಪಾಡು ಮಾಡಿದ ಉಲ್ಲೇಖವಿದೆ ಈ ಮಂಟ ಪದ ದುರಸ್ತಿ ಕಾರ್ಯಗಳನ್ನೂ ನೋಡದೇಕೆಂದೂ, ಎರಡೂ ಹೊಣೆಗಳನ್ನೂ ಗೋಪಯ್ಯನಿಗೆ ಒಪ್ಪಿಸಿ

ದಂತೆಯೂ ವಕ್ಕಾಣಿಸಲಾಗಿದೆ ಉತ್ಸವ ಸಂದರ್ಭಗಳಲ್ಲಿ ಸೇರುತ್ತಿದ್ದ ಹೆಚ್ಚುವರಿಯ ಪ್ರಯಾಣಿಕರಿಗೆ ಅತಿ ಹೆಚ್ಚಿನ ಪ್ರಮಾಣದಲ್ಲಿ ನೀರಿನ ಸರಬರಾಜು ಮಾಡಬೇಕಾಗುತ್ತಿತ್ತು ಈ ಮಾದರಿಯ ಒಂದು ಶಾಸನ (142 ಜಿ ಟಿ) ಗಮನ ಸೆಳೆಯುತ್ತದೆ ಇದರಂತ - ಆಲಯದ ಲೆಕ್ಕಿಗರಲ್ಲಿ ಒಬ್ಬರಾದ ತಿರುವೇಂಕಟಮುಡಿಯನ್ ಎಂಬುವವರು ಶಕ 1446 ರಲ್ಲಿ ಆಲಯದ ಶ್ರೀ ಭಂಡಾರಕ್ಕೆ 700 ಪಣಗಳನ್ನು ದಾನ ನೀಡಿ ಇದರಿಂದ ದೇವದಾನದ ಗ್ರಾಮಗಳಲ್ಲಿ ನೀರಾವರೀ ಕಾಲುವೆಗಳನ್ನು ಹೆಚ್ಚಿಸುವುದರ ಮೂಲಕ, ಇದರಿಂದ ಬರತಕ್ಕ ಆದಾಯದ ಹೆಚ್ಚುವರಿಯಿಂದಾಗಿ, ಶ್ರೀ ಗೋವಿಂದ ರಾಜಸ್ವಾಮಿ ಆಲಯದ ಬಳಿಯ ಉದ್ಯಾನವನದಲ್ಲಿ ಕುಡಿಯುವ ನೀರಿನ ಸರಬರಾಜು ಮಾಡಲು - ನೀರಿಗೆ ಬೆರೆಸುವ ಶುಂಠಿಯೇ ಮೊದಲಾದ ಶೀತಕರ ಸಾಮಗ್ರಿಗಳನ್ನೂ, ಮಂಟಪದಲ್ಲಿ ಬೆಳಗಿಸುವ ದೀಪಕ್ಕೆ ಎಣ್ಣೆಯನ್ನೂ, ನೀರುಹಂಚಲು ಬಳಸುವ ಕುಡಿಕೆಗಳನ್ನೂ ನೀಡುವ ವ್ಯಕ್ತಿಗೆ ಆರು ಪಣಗಳ ಸಂಬಳ ನೀಡಲು ಬಳಸಬೇಕೆಂದೂ ಕಟ್ಟುಪಾಡು ಮಾಡಿದ್ದನ್ನು ಕಾಣಬಹುದು (109 ಜಿ ಟಿ)

ಸಿರೆಟ್ಟು (ಚಿಟ್ಟಿಯೆಕ್ಕುಡು - ಏರುವಿಕೆ)ಯ ಬಳಿಯಲ್ಲಿ ಶ್ರೀಮನ್ ಮಹಾಮಂಡಲೇಶ್ವರ ತಿಮ್ಮರಾಜ ಸಲಕರಾಜನು ಶಕವರ್ಷ 1455 ರಲ್ಲಿ ಒಂದು ನೀರ - ನೆರಳನ್ನುಂಟುಮಾಡಿ ಅದರ ನಿರ್ವಹಣೆಗಾಗಿ 600 ಪಣಗಳನ್ನು ಆಲಯದ ಭಂಡಾರಕ್ಕೆ ಒಪ್ಪಿಸಿ ಆಲಯದ ಅಧಿಕಾರಿಗಳಿಗೆ ಈ ಹೊಣೆಯನ್ನು ಒಪ್ಪಿಸಿದನು

## 19. ರಾಮಾನುಜ ಕೂಟ ಅನ್ನಸತ್ರಗಳು

ಈ ಆಲಯದಲ್ಲಿ ದೇವರಿಗೆ ನಿವೇದಿತವಾದ ಆಹಾರದ ಒಂದು ಭಾಗವನ್ನು ಭಕ್ತರಲ್ಲಿ ಸ್ವಾಮಿಯ ಪ್ರಸಾದವೆಂದು ಹಂಚುವುದು ಪರಂಪರೆಯಾಗಿ ಬಂದಿದ್ದು, ಬೇರೆ ಬೇರೆ ಕಾಲದಲ್ಲಿ ಸ್ವಾಮಿಗೆ ನೈವೇದ್ಯದ ಏರ್ಪಾಡು ಮಾಡುವಾಗ ಈ ಬಗ್ಗೆಯೂ ದಾನಿಗಳು ಸೌಲಭ್ಯವನ್ನುಂಟುಮಾಡಿದರು ಇಂತಹ ಹಲವಾರು ಶಾಸನಗಳು ಇದ್ದು ಈ ಪ್ರಸಾದ ವಿತರಣೆಯ ಜವಾಬ್ದಾರಿ ಆಲಯದ ಅಧಿಕಾರಿಗಳಿಗೆ (ಸ್ಥಾನತ್ತಾರರಿಗೆ) ಸೇರಿದ್ದುದಾಗಿದ್ದಿತು

ಅತ್ಯಂತ ಪ್ರಾಚೀನ ಉಲ್ಲೇಖವೆಂದರೆ ಜಿ ಟಿ 220 ರಲ್ಲಿ ಇರುಂಗೋಲಕ್ಕನ್ ಅಥವಾ ಗುಣವಾನ್ ಅಪರಾಜಿತನ್ ಹತ್ತನೆಯ ಶತಮಾನದಲ್ಲಿ ಇಬ್ಬರು ಬ್ರಾಹ್ಮಣರಿಗೆ ಎರಡು ಬಟ್ಟಲು ಪ್ರಸಾದ ನೀಡುವ ಏರ್ಪಾಡು ಮಾಡಿದ್ದೇ ಆಗಿದೆ ನಂತರದ ಉಲ್ಲೇಖ (195 - ತಿ ತಿ) ಇಳದೂರು ನಾಡಿನಲ್ಲಿದ್ದ ಸರ್ವಮಾನ್ಯ ಗ್ರಾಮವಾದ ಸಿಂಗಾನಲ್ಲೂರು ಅಥವಾ ಪೊರಗಲೂರು ಗ್ರಾಮಾದಾಯದ ಒಂದು ಭಾಗವನ್ನು ಸಿತಕರಗಂಡ ಮರದಲ್ಲಿ ಮೂವತ್ತೆರಡು ಮಂದಿ ಶ್ರೀವೈಷ್ಣವರ ಭೋಜನಕ್ಕೆ ಬಳಸಬೇಕೆಂದು ಆಲಯದ ಅಧಿಕಾರಿಗಳಿಗೆ ಹೊಣೆ ಒಪ್ಪಿಸಿದ ಸಿಂಗಯ್ಯದಂಡನಾಯಕನ - ಕ್ರಿ ಶ 14 ನೇ - ಶತಮಾನದ ದಾನಶಾಸನದಲ್ಲಿ ಕಂಡುಬರುತ್ತದೆ

ಆಲಯದ ಅಧಿಕಾರಿಗಳ ಸಂಬಂಧವೇ ಇಲ್ಲದಂತೆ ಯಾತ್ರಿಕರಿಗೆ ಉಚಿತವಾಗಿ ಭೋಜನ ನೀಡುವ ಕೀರ್ತಿಯು ರಾಮಾನುಜ ಕೂಟಗಳನ್ನು ತಿರುಪತಿ ಹಾಗೂ ತಿರುಮಲೆಗಳಲ್ಲಿ ನಿರ್ಮಿಸಿ ಅವುಗಳನ್ನು ಕಂದಾಡೈ ರಾಮಾನುಜಯ್ಯಂಗಾರ್ಯರ ಮೇಲ್ವಿಚಾರಣೆಗೆ ಒಪ್ಪಿಸಿದ ಸಾಳುವ ಗುಂಡದೇವ ಮಹಾರಾಜನ ಮಗ ಸಾಳುವ ನರಸಿಂಹದೇವ ಮಹಾರಾಜನಿಗೆ ಸಲ್ಲಬೇಕು ಇವುಗಳ ಸ್ಥಾಪನೆಯ ಸ್ಪಷ್ಟವಾದ ದಿನವನ್ನು ಖಚಿತವಾಗಿ ತಿಳಿಸಿಲ್ಲವಾದರೂ, ಇವುಗಳ ಬಗೆಗಿನ ಉಲ್ಲೇಖಗಳು ಅನೇಕವಾಗಿದ್ದು, ಇವು ಶಕವರ್ಷ 1378 ರ ಧಾತು ಸಂವತ್ಸರದಿಂದ ಆರಂಭಿಸಿ ಶಕವರ್ಷ 1444 ರ ಚಿತ್ರಭಾನು ಸಂವತ್ಸರದ ವರೆಗಿವೆ ತಿರುಮಲೆಯ ರಾಮಾನುಜಕೂಟ ಸನ್ನಿಧಿಬೀದಿಯಲ್ಲಿದ್ದು ತಿರುಪತಿಯದು ಪ್ರಾಯಶಃ ಆಲಯ ಪ್ರಾಂಗಣದಲ್ಲಿಯೇ ಇದ್ದಿರಬಹುದು

ರಾಮಾನುಜ ಕೂಟದ ಆ ನಂತರದ ಉಲ್ಲೇಖವೆಂದರೆ ಶಕವರ್ಷ 1435 ರಲ್ಲಿ (386 ತಿ ತಿ) ಶ್ರೀ ವೆಂಕಟೇಶ್ವರಸ್ವಾಮಿಯ ನಿತ್ಯದ ಅರ್ಧಯಾಮಪೂಜೆಯ (ಸಂಜೆಪೂಜೆಯ) ನಂತರದಲ್ಲಿ ಸ್ವಾಮಿಗೆ ನಿವೇದಿತವಾದ ಪಾಲೇಡು ಕುಳಂಬುವಿನಲ್ಲಿ ತನ್ನ ದಾನದ ಹಕ್ಕಿನಲ್ಲಿ ಬರುವ ಒಂದು ನಾಳಿ ಭಾಗವನ್ನು ದಾನಿಯಾದ ಪೆರಿಯ ಓಬುಳ ನಾಯಕನು ತಾನು ಆರಂಭಿಸಿದ ರಾಮಾನುಜಕೂಟಕ್ಕೆ ಒಪ್ಪಿಸಿದನೆಂಬುದೇ ಆಗಿದೆ

201, 202, 203 ತಿ ತಿ ಶಾಸನಗಳಲ್ಲಿ ಕಂಡುಬರುವಂತೆ ಶ್ರೀಕೃಷ್ಣದೇವರಾಯನೂ ಸಹ ತನ್ನ ಒರಿಸ್ಸಾ ದಂಡಯಾತ್ರೆಯಲ್ಲಿ, ಪ್ರತಾಪರುದ್ರಗಜಪತಿಯನ್ನು ಸೋಲಿಸಿ, ಕೊಂಡವೀಡುವರೆಗೆ ಬೆನ್ನು ಹತ್ತಿ, ಉದಯಗಿರಿಯನ್ನು ಹಿಡಿದು, ತನ್ನ ರಾಜಧಾನಿಗೆ ಹಿಂದಿರುಗುವಾಗ ತನ್ನ ಇಬ್ಬರು ರಾಣಿಯರೊಡನೆ ತಿರುಮಲೆಗೆ ಆಗಮಿಸಿ ಸ್ವಾಮಿಯ ಪೂಜೆಯಲ್ಲಿ ತಮ್ಮ ನಿವೇದನೆಯ ಪಾಲಿಗೆ ಬರುವ ಅನ್ನಪ್ರಸಾದಗಳನ್ನು ತಿರುಮಲೆಯಲ್ಲಿ ಆರಂಭಿಸಿದ ಸತ್ರದಲ್ಲಿ ಬ್ರಾಹ್ಮಣ ಭೋಜನಕ್ಕೆ ಒಪ್ಪಿಸಬೇಕೆಂದು ಏರ್ಪಾಡು ಮಾಡಿದನು. ಇದು ನಡೆದದ್ದು ಶಕವರ್ಷ 1445 ರಲ್ಲಿ ಶಕವರ್ಷ 1438 ರಲ್ಲಿ (180 ತಿ.ತಿ) ಎಲ್ಲಪ್ಪ ನಾಯಕನು, ಶ್ರೀಕೃಷ್ಣರಾಯನ ಕೀರ್ತಿಯ ಬೆಳವಿಗೆಗಾಗಿ ಶ್ರೀ ವೆಂಕಟೇಶ್ವರಸ್ವಾಮಿಗೆ ಪ್ರತಿದಿನವೂ ಎಂಟು ತಿರುಪ್ಪಾನಕ ನಿವೇದನೆಗೆಂದು ಮೂರು ಹಳ್ಳಿಗಳನ್ನು ದಾನ ಮಾಡಿದ ಈ ನಿವೇದನೆಯ ಪ್ರಸಾದ ವಿತರಣೆಯಲ್ಲಿ ಅದನ್ನು ಆಲಯದ ಅಧಿಕಾರಿಗಳು ಅಂದಿನ ರಾಮಾನುಜಕೂಟದಲ್ಲಿ ಬಳಸಲು ಅನುಮತಿಸಿದ ಈ ರಾಮಾನುಜ ಕೂಟ ಪ್ರಾಯಶಃ ಸಾಳುವ ನರಸಿಂಹನದಾಗಿದ್ದಿರಬೇಕು

ಶಕವರ್ಷ 1441 ರಲ್ಲಿ ತಿಮ್ಮರಸಯ್ಯಂಗಾರ್ಯನ ಮಗನಾದ ರಾಯಸಂಕೊಂಡಮರಸಯ್ಯನು ಸ್ವಾಮಿಯ ನಿತ್ಯನೈವೇದ್ಯದ 16 ತಿರುಪ್ಪಾನಕಗಳಲ್ಲಿನ ದಾನಿಯ ದಾಯಭಾಗವನ್ನು ತಿರುಮಲೆಯ ಸತ್ರದಲ್ಲಿ ಯಾತ್ರಿಕರಲ್ಲಿ ವಿತರಿಸಬೇಕೆಂದು ಏರ್ಪಡಿಸಿದ್ದಾನೆ

ತಿ ತಿ 317 ರ ಶಾಸನ ತ್ರುಟಿತವಾಗಿದ್ದು, ಅಚ್ಯುತರಾಯ ಮಹಾರಾಯರ ಸತ್ರವನ್ನೂ, ಅಚ್ಯುತರಾಯಪುರ ಹಾಗೂ ಅಚ್ಯುತ ಪೆರುಮಾಳರನ್ನು ಕುರಿತೂ ಹೇಳುತ್ತದೆ ಇತರ ಉಲ್ಲೇಖಗಳಲ್ಲಿಯಂತೆ - ಅಚ್ಯುತರಾಯ ಪುರ ತಿರುಪತಿಯ ಉತ್ತರಭಾಗದಲ್ಲಿದ್ದಿತೆಂದು ತಿಳಿದುಬರುವುದರಿಂದ ಈ ಅನ್ನಸತ್ರವೂ ತಿರುಪತಿಯ ಉತ್ತರದಲ್ಲಿ ಎಂದರೆ ಕಪಿಲತೀರ್ಥದ ಬಳಿಯಲ್ಲಿ ಇದ್ದಿರಬೇಕು

ಮಟ್ಲಕುಮಾರ ಅನಂತರಾಯನು ಅತಿ ಶ್ರೇಷ್ಠ ದಾನಿಯಾಗಿದ್ದ ನೆನ್ನಬೇಕು ಕಾರಣ ಅವನ ದಾನಗಳು ಬೇರೆ ಬೇರೆ ಕಾಲಗಳಲ್ಲಿ ಬೇರೆ ಬೇರೆ ಕ್ಷೇತ್ರದಲ್ಲಿ ಬೇರೆ ಬೇರೆ ರೂಪಗಳಲ್ಲಿ ಬೇರೆ ಬೇರೆ ಮೌಲ್ಯಗಳದ್ದಾಗಿದ್ದವು. (269, 270 ಜಿ ಟಿ) ಅವುಗಳಲ್ಲಿ ರಾಮೇಶ್ವರದಿಂದ ಹಿಮಾಲಯದ ವರೆಗೆ ಬೇರೆ ಬೇರೆ ಕಡೆಗಳಲ್ಲಿ ಸ್ಥಾಪಿಸಲಾದ ಅನ್ನಸತ್ರಗಳೂ ಇದ್ದು, ಕಾಲ್ನಡಿಗೆಯ ಯಾತ್ರಿಕರಿಗೆ ವರದಾನವೆನಿಸಿದ್ದು, ಅವನ ದಾನದ ಹಿರಿಮೆಯನ್ನು ಸಾರುವಂತಹ ಸತ್ರಗಳಾಗಿದ್ದವು.

ಹೀಗೆ ಹೆಚ್ಚುಗೊಳ್ಳುತ್ತಿದ್ದ ಉತ್ಸವಗಳಿಂದಾಗಿ ಯಾತ್ರಿಕರ ಸಂಖ್ಯೆ ಹೆಚ್ಚುತ್ತ ಬಂದು ಹೆಚ್ಚು ಹೆಚ್ಚಿನ ಸೌಲಭ್ಯಗಳನ್ನು ಒದಗಿಸುತ್ತ ಬಂದು, ಯಾತ್ರಿಕರ ಅಶನ ವಸತಿಗಳಿಗಾಗಿ ರಾಜರ, ಸಾಮಂತರ, ಶ್ರೀಮಂತರ ದಾನಗಳೂ - ವೈಷ್ಣವ ಆಚಾರ್ಯರ

ಪ್ರೋತ್ಸಾಹದಿಂದಾಗಿ ಉಂಟಾದವೆಂದು ಹೇಳ ಬೇಕು ಇದರಿಂದಾಗಿ ತಿರುಮಲೆಯ ಪ್ರಸಿದ್ಧಿ ಹೆಚ್ಚಾಗುತ್ತ ನಡೆದು ಆಲಯಗಳ ಬೆಳವಣಿಗೆಗೆ ಕಾರಣವಾಯಿತು

## 20. ಆಲಯಗಳು - ವಿಸ್ತರಣಗಳು ದುರಸ್ತಿಗಳು

ಮುಖ್ಯದೇವಾಲಯದ ವಿಸ್ತರಣಗಳಿಗೆ, ದುರಸ್ತಿಗಳಿಗೆ ನಮಗೆ ಇರುವ ಚಾರಿತ್ರಿಕ ಆಧಾರಗಳೆಂದರೆ ಶಾಸನಗಳು

ಕೊಪ್ಪಟ್ರ ಮಹೇಂದ್ರ ಪೆನ್ಮಾರನ ಆಡಳಿತದ ಹದಿನಾಲ್ಕನೆಯ ವರ್ಷದಲ್ಲಿ ಹಾಕಿಸಲಾದ ತಿ ತಿ 18 ಹಾಗೂ 19 ರ ಶಾಸನಗಳಿಂದಾಗಿ, ತಿರುವಿಳಂಕೋಯಿಲ್ (ಬಾಲಾಲಯ) ಕರ್ಮಾರ್ಚನೆ (ವಿಶೇಷ ಪೂಜೆ)ಗಳು ಮಣವಾಳ ಪೆರುಮಾಳ್ (ಸುಂದರ ದೈವ - ವೆಂಕಟಸುಂದರ) ರಜತ ಮೂರ್ತಿಯ ಸ್ಥಾಪನೆಯಿಂದಾಯಿತೆಂದು ತಿಳಿದುಬರುತ್ತದೆ

ಶಕ 1339 ರಲ್ಲಿ ತಿರುಮಲೆಯ ದೇವಾಲಯ ಕೇಂದ್ರಕ್ಕೆ ಮುಖಮಂಟಪವನ್ನು ಸೇರಿಸಲಾಯಿತು ಇದೇ ಈಗ ತಿರುಮಲೆಯ ಆಲಯಕೇಂದ್ರ ತಿರುಮಾಮಣಿ ಮಂಟಪವೆಂದು ಕರೆಯಲಾಗುವ ಈ ಮುಖ ಮಂಟಪ ತಳಗಟ್ಟಿನಿಂದ ಹಿಡಿದು ಸ್ತೂಪಿಗಳವರೆಗೆ-ಮೇಲ್ಛಾವಣಿಯವರೆಗೆ ಚಂದ್ರಗಿರಿಯ ಮಾಧವರಸ ಅಥವಾ ಮಲ್ಲನ ಮಾಡಿದ ದಾನದಿಂದ ನಿರ್ಮಾಣವಾಯಿತು

ಸಾಳುವ ನರಸಿಂಹನ ಕೀರ್ತಿಯನ್ನು ಎತ್ತಿ ಹಿಡಿಯಲು ಶಕ 1404 ರಲ್ಲಿ ಸ್ಥಾನತ್ತಾರರು ತಿರುಮಲೆಯಲ್ಲಿ ಒಂದು ಮಂಟಪವನ್ನೂ ಗೋಪುರವನ್ನೂ ನಿರ್ಮಿಸಲು ಆರಂಭಿಸಿದರು ಇದರ ಖಚಿತವಾದ ಸ್ಥಳವನ್ನು ಸೂಚಿಸಲಾಗಿಲ್ಲ ತಿರುಕ್ಕೋನೇರಿ (ಸ್ವಾಮಿಪುಷ್ಕರಿಣಿ)ಯ ದಡದಲ್ಲಿ ಸಾಳುವ ನರಸಿಂಹರಾಯನು ಮಂಟಪಗಳನ್ನೂ ನಿರ್ಮಿಸಿದನೆಂದು ಹೇಳಲಾಗಿದೆ ಪುಷ್ಕರಿಣಿಯ ಮಧ್ಯದಲ್ಲಿಯೂ ಒಂದು ಮಂಟಪವನ್ನು ನೀರಾಳಿ ಮಂಟಪ ಅಥವಾ ವಸಂತೋತ್ಸವ ಮಂಟಪ - ನಿರ್ಮಿಸಿದನೆಂದೂ ಇದು ತೆಪ್ಪೋತ್ಸವದಲ್ಲಿ ಬಳಕೆಯಲ್ಲಿದ್ದಿತೆಂದೂ ಹೇಳಲಾಗಿದೆ (54 ತಿ ತಿ ) ತಿ ತಿ 266 ಶಾಸನದಂತೆ ಮತ್ತೆರಡು ಮಂಟಪಗಳ ಉಲ್ಲೇಖವಿದೆ ಇವುಗಳನ್ನು ಪೆರಿಯ ತಿರುಮಂಟಪವೆಂದೂ, ತಿರುವೆಂಕಟನಾಥನ್ ಮಂಟಪವೆಂದೂ ಕರೆಯಲಾಗಿದೆ

ತಿ ತಿ 248 ರ ಶಾಸನದಂತೆ ಆಲಯದ ಸ್ಥಾನತ್ತಾರರು 1404 ಶಕವರ್ಷಕ್ಕೆ ಸ್ವಲ್ಪ ಮೊದಲೇ ಸಾಳುವ ನರಸಿಂಹನ ಹೆಸರಿನಲ್ಲಿ ಒಂದು ಗೋಪುರ ನಿರ್ಮಾಣದ ಕೆಲಸವನ್ನು ಆರಂಭಿಸಿದ್ದರು ಸಾಳುವ ನರಸಿಂಹನು ಹಿಂದೆ ಎಂದರೆ ಶಕ 1394 ರಲ್ಲಿನ ನಂದನ ವರ್ಷದ ಉತ್ಥಾನದ್ವಾದಶಿಯಂದು (13-10-1472) ಕೊಡವೂರು ನಾಡಿನ ದುರ್ಗಸಮುದ್ರವನ್ನು ದಾನ ಮಾಡಿದ್ದು ಅದನ್ನೀಗ ಶಾಶ್ವತಗೊಳಿಸಿದ ಈ ಗ್ರಾಮವನ್ನು ತಿರುಪ್ಪಣಿಪುರವೆಂದು ಕರೆದು ಪಿಳ್ಳೈ ತಿರುಪ್ಪಣಿ - ಭಂಡಾರತ್ತಾರನ ಹೆಸರಿನಲ್ಲಿ ನೊಂದಾವಣೆಯಾಗಿ ಆತ ಈ ಹಳ್ಳಿಯ ಆದಾಯವನ್ನು ತಿರುಮಲೆ ತಿರುಪತಿಗಳಲ್ಲಿ ಗೋಪುರಗಳ ನಿರ್ಮಾಣದಲ್ಲಿ ಹಾಗೂ ಆಲಯದವರು ಆರಂಭಿಸಿದ್ದ ನರಸಿಂಹರಾಯ ಮಂಟಪ ನಿರ್ಮಾಣದಲ್ಲಿಯೂ ಬಳಸುವ ಅಧಿಕಾರ ಹೊಂದಿದ್ದ 269 - 270 ಜಿ ಟಿ ಶಾಸನಗಳು ಮಟ್ಲಕುಮಾರ ಅನಂತರಾಯನು ಮೊದಲ ದೆಟ್ಟದ ಶಿಖರದಲ್ಲಿ ನಿರ್ಮಿಸಿದ್ದು, ಇದನ್ನೇ ಅಗ್ರಗೋಪುರವೆಂದು (ಈಗ ಗಾಳಿಗೋಪುರ ಎಂಬ ಮೂರುನಾಮದ ಗೋಪುರ) ಕರೆಯಲಾಗಿದೆ

ತಿ.ತಿ 237, 238, ಶಾಸನಗಳು ಶಕವರ್ಷ 1281 ರಲ್ಲಿ (ಕ್ರಿ.ಶ 1352 - ಜುಲೈ 6) ಸಾಳುವ ಮಂಗಿದೇವ ಮಹಾರಾಜನು ಗರ್ಭಗುಡಿಯ ಮೇಲಿನ ಗೋಪುರವನ್ನು - ವಿಮಾನಗೋಪುರವನ್ನು - ಚಿನ್ನದ ಗಿಲೀಟು ಮಾಡಿದ ರೇಕುಗಳಿಂದ ಅಲಂಕರಿಸಿದನೆಂದು ಹೇಳುತ್ತವೆ ವಿಮಾನ ಗೋಪುರದ ಮೇಲೆ ಆತ ಚಿನ್ನದ ಕಳಶವನ್ನು ಸ್ಥಾಪಿಸಿದನು ಇದರಿಂದಾಗಿ ಆಲಯದ ವೈಭವ ಹೆಚ್ಚಾಯಿತು ಕಾಲಾನಂತರದಲ್ಲಿ ಈ ಕಳಶ ಜೀರ್ಣವಾಗಲು ಕಲಿಯುಗದ 5010 ನೇ ವರ್ಷದಲ್ಲಿ (ಕ್ರಿ ಶ 1909) (ತಿ ತಿ 242) ಬಾವಾಜಿ ರಾಮಲಕ್ಷ್ಮಣ ದಾಸಜೀ ಅವರಿಂದ ಹೊಸದೊಂದು ಕಳಶವನ್ನು ಸ್ಥಾಪಿಸಲಾಯಿತು

ತಿರುಪತಿಯಲ್ಲಿನ ಪ್ರಮುಖ ಗೋಪುರಗಳು ಮಟ್ಲಕುಮಾರ ಅನಂತರಾಯನ ಕೈಂಕರ್ಯ ಜಿ ಟಿ 22 ರಲ್ಲಿ ತಿಳಿಸಿರುವ ಪೆರಿಯ ತಿರುಗೋಪುರವು ಚಕ್ರತ್ತಾಳ್ವಾರರ ನಿಂತ ಪ್ರತಿಮೆಯನ್ನು ಹೊಂದಿರುವುದು - ಇಂದು ಆಲಯದಿಂದ 200 ಗಜ ಪೂರ್ವದಲ್ಲಿರುವ ದೊಡ್ಡ ಗೋಪುರವಲ್ಲ ಈ ದೊಡ್ಡ ಗೋಪುರವನ್ನು ಮಟ್ಲಕುಮಾರ ಅನಂತರಾಯನು ತನ್ನ ತಂದೆ ತಾಯಿಗಳ ನೆನಪಿನಲ್ಲಿ ನಿರ್ಮಿಸಿ ಅವರ ವಿಗ್ರಹಗಳನ್ನೂ ಅವುಗಳ ಕೆಳಗೆ ಹೆಸರುಗಳನ್ನು ಎಡಗಡೆಗೆ ಕೆತ್ತಿಸಿರುವಂತೆ ತೆಲುಗು ಶಾಸನವು ಹೇಳುತ್ತದೆ (ಜಿ ಟಿ 281, 282) ಇನ್ನೊಂದು ಗೋಪುರ - ಈಗ ಹೊಸಗೋಪುರ (ಕೊತ್ತಗೋಪುರಂ)ವೆಂದು ಗುರುತಿಸುವ ಗೋಪುರ - ಮಟ್ಲಕುಮಾರ ಅನಂತರಾಯನಿಂದ ನಿರ್ಮಿತವಾದುದೆಂದು ತೆಲುಗು ಶಾಸನವು ಗುರುತಿಸುತ್ತದೆ ಇದು ಈಗ ಜೀರ್ಣೋದ್ಧಾರವಾಗಿದೆ (ಅಲಿಪಿರಿಯಿಂದ ಎರಡನೆಯದು)

## 21. ಜೀಯರ್ ಮಠ

ತಿರುಪತಿ - ತಿರುಮಲೆಗಳಲ್ಲಿ ಸ್ಥಾಪಿತವಾಗಿ ಜೀಯರ್ ಮಠ ಅಥವಾ ಜೀಯಂಗಾರ್ ಮಠವೆಂದು ಕರೆಯಲ್ಪಡುವ ಮಠ ಬಹುಕಾಲದಿಂದ ಆಲಯದ ಕೈಂಕರ್ಯ ನಡೆಸುತ್ತ ಬಂದಿದೆ ಶಕ 1309 ರಲ್ಲಿ (ಕ್ರಿ.ಶ 1397) ಮಾಸಿ ತಿರುನಾಳ್ ಉತ್ಸವವನ್ನು ಏರ್ಪಡಿಸಿದ ವಿಜಯನಗರದ ಮೊದಲ ರಾಜವಂಶದ ಎರಡನೇ ಹರಿಹರನ ಕಾರ್ಯನಿರ್ವಹಕನಾಗಿದ್ದ ಮುಲ್ಲೈ ತಿರುವೆಂಕಟ ಜೀಯರೇ ನಮಗೆ ತಿಳಿದುಬರುವ ಮೊದಲ ಜೀಯರ ಹೆಸರು (103 ತಿ ತಿ ) ಹರಿಹರನು ದಾನ ನೀಡಿದ ಪುಂಗೋಡು ಹಳ್ಳಿಯ ಆದಾಯವಾದ ನೂರು ಪಣಗಳನ್ನು ಒಪ್ಪಿಸಿ ಆತನ ಹೆಸರಿನಲ್ಲಿ ಮುಲ್ಲೈ ತಿರುವೆಂಕಟ ಜೀಯರು ಈ ಉತ್ಸವವನ್ನು ಏರ್ಪಡಿಸಿದರು ಇವರ ಕಾಲ ಶಕ 1309 ರಿಂದ ಶಕ 1314 ಎನ್ನಲಾಗಿದ್ದು ಇವರು ಅರಸನಾಲಯ ನಂದನವನದ (ಪುಷ್ಪೋದ್ಯಾನ) ಮೇಲು ವಿಚಾರಕರಾಗಿದ್ದ ರೆಂದು ಹೇಳಲಾಗಿದೆ (57 ಹಾಗೂ 43 ತಿ ತಿ ) ಅವರ ವಾರಸುದಾರರಲ್ಲಿ ಒಬ್ಬರ ಹೆಸರು ಎಂಬೆರುಮಾನಾರ್ ಜೀಯರ್ ಎಂಬುದಾಗಿದ್ದು ಶಕ 1367 ರಿಂದ 1415 ರ ವರೆಗೆ ಇದ್ದಂತೆಯೂ ಇವರು ಆಲಯದಲ್ಲಿನ ಎಲ್ಲ ಕಾರ್ಯಗಳನ್ನೂ ನಡೆಸುವ ಅಧಿಕಾರವನ್ನು ಹೊಂದಿದ ಕೋಯಿಲ್ ಕೆಳ್ವಿಯಾಗಿದ್ದರೆಂದೂ ತಿಳಿದುಬರುತ್ತದೆ ಇವರು ಪಂಕಯಚೆಲ್ಲಿ ನಂದನವನದ ಮೇಲ್ವಿಚಾರಕರಾಗಿದ್ದರೆಂದೂ ತಿಳಿದುಬರುತ್ತದೆ (106, 48, 15 ಹಾಗೂ 369 ತಿ ತಿ ಹಾಗೂ - 190, 411 ಜಿ ಟಿ ) ಆಲಯದಲ್ಲಿ ಇವರ ಸೇವೆಯು ಸುಮಾರು ಐವತ್ತು ವರ್ಷಗಳ ಕಾಲ ಕ್ರಿ.ಶ 1445 ರಿಂದ 1493 ರ ವರೆಗೆ ಹರಡಿದ್ದಿತು ಇವರಾದ ನಂತರ ಒಡನೆಯೇ ಈ ನಂದನ ವನದ ಮೇಲು ವಿಚಾರಕರಾಗಿ ರಾಮಾನುಜ ಜೀಯರ್ ಕಂಡುಬರುತ್ತಾನೆ ಶಕ ವರ್ಷ 1414 ರ ಆನಂದ ನಾಮ ಸಂವತ್ಸರದ 333 ತಿ ತಿ (ಕ್ರಿಶ 1494 - ಏಪ್ರಿಲ್ - 2) ತಿರುವೆಂಕಟ ನಾಥನ್ ನಂದನವನದ ಅನುಸಂಧಾನಂ ತಿರುವೆಂಕಟ ಜೀಯರ್ ಇವರನ್ನು ಅನುಸರಿಸಿದರು ಶಕ 1426 ರಿಂದ 1442 (ಕ್ರಿ.ಶ. 1504 ರಿಂದ 1520) ಇದು ಶ್ರೀಕೃಷ್ಣ ದೇವರಾಯನ ಕಾಲ ಹಲವು ಶಾಸ

ನಗಳಲ್ಲಿ ಇವರು ಪೇರರುಳಾಳನ್ ನಂದನವನದ ಕಾರ್ಯನಿರ್ವಹಣಾಧಿಕಾರಿಯೆಂದೂ ಗುರುತಿಸಲ್ಪಟ್ಟಿದ್ದಾರೆ

ಜಿ ಟಿ 292 ರಲ್ಲಿ ಇವರನ್ನು ಪೆರಿಯ ಕೋಯಿಲ್‌ಕೆಲ್ವಿ ಎಂದು ಹೆಸರಿಸಲಾಗಿದೆ ಇದರಿಂದಾಗಿ ಒಬ್ಬ ಕಿರಿಯ ಕೋಯಿಲ್ ಕೆಲ್ವಿ ಇದ್ದಿರಬೇಕೆಂದು ತೋರುತ್ತದೆ ಶಕವರ್ಷ 1442 ರಲ್ಲಿ ವಿಕ್ರಮ ಸಂವತ್ಸರದಲ್ಲಿ ಇವರನ್ನು ಅನುಸರಿಸಿ ಬಂದವರು ಕೋಯಿಲ್ ಕೆಲ್ವಿ ರಾಮಾನುಜ ಜೀಯರ್ ಇವರು ಪಂಕಯಚ್ಚೆಲ್ಲಿ ನಂದನವನದ ನಿರ್ವಹಣಾಧಿಕಾರಿಯಾಗಿದ್ದು ಇವರಿಗೆ ವೇದಾಂತಮಾರ್ಗ ಪ್ರತಿಷ್ಠಾಪನಾಚಾರ್ಯ ಎಂದೂ ಪರಮಹಂಸ ಪರಿವ್ರಾಜಕಾಚಾರ್ಯರೆಂದೂ ಬಿರುದಗಳಿದ್ದವು. ಈತನ ಎರಡು ದಾಖಲೆಗಳು ಜಿ ಟಿ 15 ಹಾಗೂ 598 ತಿ ತಿ. ಶಾಸನಗಳು ಶಕವರ್ಷ 1442 ಹಾಗೂ 1449 ರಲ್ಲಿನವಾಗಿದ್ದು ಕೃಷ್ಣರಾಯನ ಕಾಲಕ್ಕೆ ಸೇರಿವೆ ಈ ರಾಮಾನುಜ ಜೀಯರರ ನಂತರ ಬಂದವರು ಪಂಕಯಚ್ಚೆಲ್ಲಿ ನಂದನವನದ ವಡತಿರುವೆಂಕಟ ಜೀಯರ್ ಶಕವರ್ಷ 1457 ರ ಮನ್ಮಥ ವರ್ಷದ 472 ತಿ ತಿ (7-7-1535) ಇದೇ ವರ್ಷದಲ್ಲಿ ಇವರ ವಾರಸುದಾರರಾಗಿ ಬಂದ ಕೋಯಿಲ್‌ಕೆಲ್ವಿ ಯತಿರಾಜ ಜೀಯರು ಪೇರರುಳಾಳನ್ ನಂದನವನವನ್ನೂ ಪೇರರುಗಳಾಳನ್ ಮಠವನ್ನೂ ನೋಡಿಕೊಳ್ಳುತ್ತಿದ್ದರು (324 ಜಿ ಟಿ ಹಾಗೂ 410 ತಿ ತಿ) ಈ ಯತಿರಾಜ ಜೀಯರು ಮಠದ ಅಧಿಪತಿಗಳಾಗಿ ಆರೇಳು ವರ್ಷ - ಶಕ ವರ್ಷ 1463 ಪ್ಲವ ಸಂವತ್ಸರದವರೆಗೆ (ಕ್ರಿ ಶ 1541) ಇದ್ದರು ಇವರು ಅಳಗಿಯ ಮಣವಾಳ ಜೀಯರ ಶಿಷ್ಯರೆಂದು ಹೇಳಲಾಗಿದೆ ನಂತರ ವಾನಮಾಮಲೈ ಜೀಯರು - ಅಳಗಿಯ ಮಣವಾಳ ಮಠಾಧಿಪತಿಗಳು - ಮಠಾಧಿಪತಿಗಳಾಗಿ ಶಕ 1463 ರಿಂದ ಶಕ 1468 ರ ವರೆಗೆ ಆರುವರ್ಷಗಳ ವರೆಗೆ ಆಡಳಿತ ನಡೆಸಿದರು (ಕ್ರಿ ಶ 1541 ರಿಂದ 1546) (402, 509 ತಿ ತಿ) ಈ ವಾನಮಾಮಲೈ ಜೀಯರು ಪ್ರಾಯಶಃ ಮೇಲೆ ಹೇಳಿದ ಪಂಕಯಚ್ಚೆಲ್ಲಿ ನಂದನವನದ ರಾಮಾನುಜ ಜೀಯರ ಶಿಷ್ಯರಾಗಿರಬೇಕು ತಿ ತಿ 402 ಶಾಸನದಂತೆ (ಶಕ - 1468) ಈ ಮಠದ ಅಧಿಪತಿಗಳ ಸಂಪ್ರದಾಯದಂತೆ "ರಾಮಾನುಜ" ಹೆಸರು ಸೇರಿದಂತಹ ವಾನಮಾಮಲೈ ರಾಮಾನುಜ ಜೀಯರ್ ಎಂದಾಗಿದ್ದಿತು ಶಕವರ್ಷ 1515 ರ ವಿಜಯನಾಮ ಸಂವತ್ಸರದಲ್ಲಿ (17-1-1594) ಕೊಂಡವೀಡು ನಾಡುವಿನ ತಿಮ್ಮನಾಯಕ ಪುರವನ್ನು ದೇವಾಲಯಕ್ಕೆ ನೀಡಿದ ಅಣ್ಣನ್ ರಾಮಾನುಜ ಜೀಯರು ತೊಟ್ಟಾಲಂ ಸೀಮೆಯ ಗ್ರಾಮದಲ್ಲಿ ನೀರಾವರಿ ಕಾಲುವೆಯನ್ನು ತೋಡಿಸಿದರು (ಜಿ ಟಿ 413)

ಶ್ರೀರಂಗನಾಥ ಯಾದವರಾಯನ ಆಡಳಿತದ ಮೂರನೆಯ ವರ್ಷದಲ್ಲಿ ಹೊರಟಿದ್ದ ತಿ ತಿ 354 ನೇ ಶಾಸನವು ಈ ಮಠದ ಆರಂಭದ ಬಗ್ಗೆ ಬೆಳಕು ಚೆಲ್ಲುತ್ತದೆ ದೇಶಾಂತರಿಗಳಾದ ಜೀಯರೆಂಬ ಧಾರ್ಮಿಕ ಪಂಥದವರು, ಈ ನಂದನ ವನಗಳ ಮಠಗಳ ಸಂಬಂಧ ಹೊಂದಿದ್ದು, ಅವರಲ್ಲಿ ಒಬ್ಬರು ಜೀಯರ್ ಆಗಿ ಮಠಾಧಿಪತಿಗಳಾಗಿ ಇರುತ್ತಿದ್ದರು ಎಂದು ಕಾಣುತ್ತದೆ ದಾಖಲೆಯಾಗುವ ಕಾಲದಲ್ಲಿ ಒಬ್ಬ ಜೀಯರು ಈ ಮಠಗಳ ಆಡಳಿತಾಧಿಕಾರಿಯಾಗಿದ್ದು ಅದೇ ಸಂಪ್ರದಾಯ ಮುಂದುವರೆಯಿತು ಜೀಯರ್ ಮಠದಲ್ಲಿ ಈ ಜೀಯನ್ ತಮ್ಮ ದೇಹಾಂತ್ಯದವರೆಗೆ ಇರಬಹುದೆಂದೂ ಇವರ ಮರಣಾನಂತರ ಮಠದ ಎಲ್ಲ ಆಸ್ತಿಯೂ ಸಿಂಗಯ ದಂಡನಾಯಕನ ವಶಕ್ಕೆ ಸೇರಬೇಕೆಂದೂ, ತಿರುವೆಂಕಟ ಮುಡೈಯಾನನ ಸೇವಾಕೈಂಕರ್ಯಕ್ಕೆ ಸ್ಥಾನತ್ತಾರರು ಮತ್ತೊಬ್ಬ ದೇಶಾಂತರಿಯನ್ನು ನೇಮಕ ಮಾಡಬೇಕಾಗಿದ್ದಿತು ದೇಶಾಂತರಿ ಪದ್ಧತಿಯಂತೆ, ಹೊಸದಾಗಿ ನೇಮಕವಾದ ಜೀಯರು ಆಲಯದ ಶ್ರೀ ಭಂಡಾರಕ್ಕೆ 400 ಪಣಂಗಳನ್ನು ತನ್ನ ಜೀವಿಕೆಗಾಗಿ ನಿರ್ಣಯವಾದ ನಿವೇದನೆಯ ಬಂಡವಾಳವಾಗಿ ನೀಡಬೇಕೆಂಬ ನಿಯಮವಿದ್ದದ್ದನ್ನುದಾಖಲೆಯಲ್ಲಿ ಕಾಣಬಹುದಾಗಿದೆ

ದೇಶಾಂತರಿಗಳು ವಾಸಮಾಡಲು ಅವಕಾಶವಿದ್ದಂತೆ ತಿರುಮಲೆಯಲ್ಲಿ ಸ್ಥಾಪನೆಯಾಗಿದ್ದ ಈ ಮಠದ ಅಧೀನದಲ್ಲಿ ಅರಸನಾಲಯ ನಂದನ ವನ ಹಾಗೂ ವಸಂತ ಗೋಪನ್ ನಂದನವನಗಳು - ತಿ.ತಿ 354 ನೇ ಶಾಸನದಲ್ಲಿ ಹೇಳುವಂತೆ - ಮಠಕ್ಕೆ ಸೇರಿದ್ದು, ಇದು ಪ್ರಾಯಶಃ ತಿ ತಿ 434 ಹಾಗೂ 676 ಶಾಸನಗಳಲ್ಲಿ ಹೇಳಲ್ಪಟ್ಟಿರುವ ಶ್ರೀಮಾನ್ ಮಹಾಪ್ರಧಾನಿ ಇಮ್ಮಡಿ ರಾಹುತರಾಯನ್ ಸಿಂಗಯ ದಣ್ಣಾಯಕ ಸಿತಕರಗಂಡನಿಂದ ನಿರ್ಮಾಣವಾದದ್ದಿರಬೇಕು 354 ತಿ ತಿ ಶಾಸನದ ಕಾಲವು ಶಕವರ್ಷ 1260 ರ ಬಹುಧಾನ್ಯ ಸಂವತ್ಸರಕ್ಕೆ ಎಂದರೆ (ಕ್ರಿ ಶ 1338 - 39) ಶ್ರೀರಂಗನಾಥ ಯಾದವರಾಯನ ಆಡಳಿತದ ಮೂರನೆಯ ವರ್ಷಕ್ಕೆ ಸಮನಾಗಿರಬೇಕು ಈತನ ಆಡಳಿತದ ಮೊದಲನೆಯ ವರ್ಷ ಶಕ - 1258 ರ ಧಾತು ಸಂವತ್ಸರಕ್ಕೆ (ಕ್ರಿ ಶ 1336-37) ಸಮ

ಭೂಮಿಕಾಣಿಗಳ ದಾನಗಳ ಮೂಲಕ ಆಲಯದಲ್ಲಿನ ಉತ್ಸವಗಳನ್ನು ಸೇವೆಗಳನ್ನು ಅಭಿವೃದ್ಧಿಗೊಳಿಸುವುದರಲ್ಲಿ ಈ ಜೀಯರುಗಳು ತಮ್ಮ ಧಾರ್ಮಿಕ ಆಸಕ್ತಿಯನ್ನು ಆಧ್ಯಾತ್ಮಿಕ ಪ್ರೀತಿಯನ್ನು ಅಭಿವ್ಯಕ್ತಗೊಳಿಸುತ್ತಿದ್ದರು ಶ್ರೀ ವೈಷ್ಣವ ಆಚಾರ್ಯರಾದ ಶ್ರೀ ರಾಮಾನುಜಾಚಾರ್ಯರಿಂದ ಮೊದಲಾದದ್ದೆಂದು ಹೇಳಲ್ಪಡುವ ಇವರ ಪರಂಪರೆ ಈಗಲೂ ತಿರುಮಲೆಯ ಆಲಯದ ಸೇವೆಯಲ್ಲಿ ನಿರತವಾಗಿರುವುದನ್ನು ಕಾಣಬಹುದು ಈ ಸ್ಥಳೀಯ ಮಠವನ್ನು ಹೇವಿಳಂಬಿ ವತ್ಸರದಲ್ಲಿ ಶಕವರ್ಷ 980 ರಲ್ಲಿ (ಕ್ರಿ.ಶ 1057 - 58) ತಿರುಮಲೆಯ ಆಂಜನೇಯ ಸ್ವಾಮಿ ಆಲಯದ ಎದುರು ಭಾಗದಲ್ಲಿ ರಾಮಾನುಜಾಚಾರ್ಯರು ಆರಂಭಿಸಿದ್ದು ಇದೇ ಅತ್ಯಂತ ಪ್ರಾಚೀನ ಮಠವೆನ್ನಲಾಗಿದೆ ಇಲ್ಲಿ ಸ್ಥಾಪಿತವಾದ ಪರಂಪರೆಯಂತೆ ತಿರುವೆಂಕಟ ಜೀಯರ್, ಶಠಗೋಪಜೀಯರ್, ಶ್ರೀರಂಗರಾಜ ರಾಮಾನುಜ ಜೀಯರ್ ಎಂಬ ಹೆಸರುಗಳು ಪುನರಾವೃತ್ತವಾಗುವುದು

ಮುಲ್ಲೈ ತಿರುವೆಂಕಟಜೀಯರ್, ಅವರ ವಾರಸುದಾರ ಎಂಬೆರುಮಾನಾರ್ ಜೀಯರ್‌ಗಳನ್ನು ಶ್ರೀರಾಮಾನುಜರ ನಂತರ ಬಂದ ಮೂರು ನಾಲ್ಕನೆಯ ಮಠಾಧಿಪತಿಗಳಾಗಿ ಗುರುತಿಸಬಹುದು ನಮ್ಮ ಸಂಗ್ರಹದಲ್ಲಿರುವ ಪರಂಪರಾ ಇತಿಹಾಸದ ದಾಖಲೆಗಳ ಪ್ರಕಾರ ತಿನ್ನವೆಲ್ಲಿ ಜಿಲ್ಲೆಯ ತೋತಾದ್ರಿ ಮಠ ಅಥವಾ ವಾನಮಾಮಲೈ ಮಠದ ಸ್ಥಾಪಕರಾದ ವಾನಮಾಮಲೈ ಜೀಯರ್ ಅವರ ಹೆಸರನ್ನೂ ಕಾಣಬಹುದು ಶ್ರೀಕೃಷ್ಣದೇವರಾಯನ ಕಾಲದಲ್ಲಿ ಇವರು ತಿರುಪತಿಯ ಮಠದಲ್ಲಿ ಸನ್ಯಾಸವನ್ನು ರಾಮಾನುಜರಿಂದ ಸ್ವೀಕರಿಸಿ, ದಕ್ಷಿಣಕ್ಕೆ ಸಂಚಾರ ಹೊರಟು ಆಧುನಿಕ ನಂಗುನೇರಿಯಲ್ಲಿ - ಶ್ರೀ ವರಮಂಗೈಯಲ್ಲಿ ತಮ್ಮ ಹೆಸರಿನಲ್ಲಿ ಒಂದು ಮಠವನ್ನು ಸ್ಥಾಪಿಸಿ ಪುನಃ ತಿರುಪತಿಗೆ ಆಗಮಿಸಿ ತಮ್ಮ ಜೀವನ ಶೇಷಕಾಲವನ್ನು ಕಳೆದರು ಎನ್ನಲಾಗಿದೆ ಗುರು ರಾಮಾನುಜ ಜೀಯರಿಗೂ (ಶಕ - 1442 ರಿಂದ 1449) (ಕ್ರಿಶ 1520 ರಿಂದ 1527) ಶಿಷ್ಯ ವಾನಮಾಮಲೈ ಜೀಯರಿಗೂ (ಶಕ 1463 ರಿಂದ 1468) (ಕ್ರಿ ಶ 1514 ರಿಂದ 1546) ನಡುವೆ ಎರಡು ದಶಕಗಳೇ ಕಳೆದುಹೋದವು, ಅದೂ ಸದಾಶಿವರಾಯನ ಆಳ್ವಿಕೆಯ ಕಾಲದಲ್ಲಿ ವಾನಮಾಮಲೈ ಮಠವು ಮೂಲದಲ್ಲಿ ಈ ಸ್ಥಳೀಯ ಮಠಕ್ಕೆ ಸಂಬಂಧಿಸಿದ್ದರೂ ಈಗ ಎರಡೂ ಮಠಗಳ ನಡುವೆ ಯಾವುದೇ ಸಂಬಂಧವೂ ಇಲ್ಲದೆ ಎರಡೂ ಸ್ವತಂತ್ರ ಘಟಕಗಳಾಗಿವೆ.

(ಮುಂದುವರೆಯುವುದು)

(ಮುಂದಿನಸಂಚಿಕೆಯಲ್ಲಿ

ಹಲವು ಅಪರೂಪದ ಪದಗಳ ವಿವರಣೆ)



# ವಾರ್ತಾಲಹರಿ

## ತಿರುಚಾನೂರಿನಲ್ಲಿ ವೈಭವದ ಬ್ರಹ್ಮೋತ್ಸವ

ತಿರುಚಾನೂರು ಶ್ರೀ ಪದ್ಮಾವತೀ ಅಮ್ಮನವರ ದೇವಾಲಯದಲ್ಲಿ ಕಾರ್ತೀಕ ಬ್ರಹ್ಮೋತ್ಸವಗಳು ನವಂಬರ್ 16 ರಿಂದ 24 ರವರೆಗೆ ಅತ್ಯಂತ ಸಡಗರ ಉತ್ಸಾಹಗಳಿಂದ ವೈಭವೋಪೇತವಾಗಿ ನಡೆದು ಯಶಸ್ವಿಯಾದವು.

ತಿರುಚಾನೂರು ಬ್ರಹ್ಮೋತ್ಸವವನ್ನು ತಿರುಮಲೆಯ ಬ್ರಹ್ಮೋತ್ಸವದಂತೆ ಜನಪ್ರಿಯಗೊಳಿಸಲು ಹಲವಾರು ಹೊಸ ಕ್ರಮಗಳನ್ನೂ ಈ ಬಾರಿ ಕೈಗೊಳ್ಳಲಾಗಿದ್ದಿತು ಶ್ರೀ ಪದ್ಮಾವತೀ ಅಮ್ಮನವರ ಆಲಯದ ಬದಿಯ ಕಲ್ಯಾಣಮಂಟಪ ಸಮುದಾಯದಲ್ಲಿ ತಿ ತಿ ದೇವಸ್ಥಾನಗಳ ಉದ್ಯಾನವನ ವಿಭಾಗ, ಅರಣ್ಯವಿಭಾಗ, ಆಯುರ್ವೇದ ವೈದ್ಯವಿಭಾಗ, ದಾಸಸಾಹಿತ್ಯವಿಭಾಗ, ಗ್ರಂಥ ಪ್ರಕಟನ ವಿಭಾಗಗಳು ತಮ್ಮ ತಮ್ಮ ವಿಭಾಗಗಳ ವಸ್ತುಪ್ರದರ್ಶನವನ್ನು ಏರ್ಪಡಿಸಿದ್ದರು ತಿರುಪತಿಯಿಂದ ತಿರುಚಾನೂರಿನವರೆಗೆ ಹೊರಡುವ ರಸ್ತೆಯಲ್ಲಿ ಹಲವಾರು ಕಡೆ ಸ್ವಾಗತ ಕಮಾನುಗಳನ್ನು ಆಕರ್ಷಕವಾಗಿ ನಿರ್ಮಿಸಲಾಗಿದ್ದು ಜೊತೆಗೇ ಹಲವಾರು ವಿದ್ಯುದ್ದೀಪಾಲಂಕಾರಗಳ ಚಿತ್ತಾರಗಳನ್ನೂ ನಿರ್ಮಿಸಲಾಗಿದ್ದಿತು ತಿರುಚಾನೂರಿನ ತೋಳಪ್ಪ ಉದ್ಯಾನವನದ ಬಯಲು ರಂಗಮಂದಿರದ ಬಳಿ ಅಮ್ಮನವರ ಉತ್ಸವ ಮೂರ್ತಿಯ ಬಿಡಾರವನ್ನೂ, ಸಾಂಸ್ಕೃತಿಕ ಕಾರ್ಯಕ್ರಮ ವೇದಿಕೆಯನ್ನೂ ಏರ್ಪಡಿಸಲಾಗಿದ್ದು ಧರ್ಮಪ್ರಚಾರ ಪರಿಷತ್ ವತಿಯಿಂದ ಬೆಳಗಿನಿಂದ ಸಾಯಂಕಾಲದ ವರೆಗೆ ಸಂಗೀತ, ಭಜನೆ, ವೇದ ಪಾರಾಯಣ, ಪುರಾಣ ಪ್ರವಚನ, ಧಾರ್ಮಿಕೋಪನ್ಯಾಸ, ಹರಿಕಥೆ, ನೃತ್ಯ ನಾಟಕ, ಪ್ರದರ್ಶನಗಳೂ ನಡೆದವು.

ನವಂಬರ್ ಹದಿನೈದರಂದು ಬ್ರಹ್ಮೋತ್ಸವಗಳ ಅಂಕುರಾರ್ಪಣೆ ನಡೆಯಿತು. ಅಂದು ಬೆಳಗಿನಿಂದ ನಡೆದ ಲಕ್ಷ ಕುಂಕುಮಾರ್ಚನೆಯಲ್ಲಿ ರೂ 1116/ ಸೇವಾಶುಲ್ಕ ನೀಡಿ 147 ಮಂದಿ ಗೃಹಸ್ಥರು ಭಾಗವಹಿಸಿದ್ದರು ಅಂದು ಸಂಜೆ ಹುತ್ತದ ಮಣ್ಣನ್ನು ಸಂಗ್ರಹಿಸಿ ಯಾಗಶಾಲೆಗೆ ತರಲಾಯಿತು ಕುಂಭಗಳಲ್ಲಿ ಅಂಕುರಾರ್ಪಣೆ ಮಾಡಲಾಯಿತು ಮಾರನೆಯ ದಿನ ಬೆಳಗ್ಗೆ ಧ್ವಜಾರೋಹಣ ಕಾರ್ಯಕ್ರಮ ವೇದ ಮಂತ್ರಗಳ ನೆರವಿನಲ್ಲಿ ಯಶಸ್ವಿಯಾಯಿತು ಅಮ್ಮ

ನವರ ಧ್ವಜವಾದ ಗಜ ಚಿಹ್ನೆಯ ಕೇತನವನ್ನು ಧ್ವಜ ಸ್ತಂಭದ ಮೇಲೆ ಉತ್ಸಾಹದಿಂದ ಆರೋಹಣಗೊಳಿಸಲಾಯಿತು

ಅಂದು ಸಂಜೆ ಅಮ್ಮನವರಿಗೆ ರಾಜ್ಯಲಕ್ಷ್ಮಿ ಅಲಂಕಾರ ವೇದಮಂತ್ರಗಳ, ಸಾಮಗಾನದ ಸಂಗೀತದ ಹಿನ್ನೆಲೆಯಲ್ಲಿ ಅಮ್ಮನವರನ್ನು ಉಯ್ಯಾಲೆಯಲ್ಲಿ ಆಸೀನಗೊಳಿಸಿ ತೂಗಲಾಯಿತು ಸಾವಿರಾರು ಮಂದಿ ಭಕ್ತರು ಅಮ್ಮನವರಿಗೆ ಅಡ್ಡಬಿದ್ದು ಅನುಗ್ರಹೀತಭಾವದಿಂದ ತುಂಬಿದ ಹೃದಯದವರಾದರು ಅನಂತರ ಪುರವೀಧಿಗಳಲ್ಲಿ ಚಿಕ್ಕ ಶೇಷವಾಹನದಲ್ಲಿ ಊರ ಮೆರವಣಿಗೆ ಬಂದಾಗ ಪುರಜನರು ತಮ್ಮ ತಮ್ಮ ಮನೆಯ ಮುಂದೆ ನೆಲ ತೊಳೆದು ರಂಗೋಲಿಯಿಟ್ಟು ಅಮ್ಮನವರನ್ನು ಸ್ವಾಗತಿಸಿದರು

ಮಾರನೆಯದಿನ ಬೆಳಗ್ಗೆ ದೊಡ್ಡ ಶೇಷವಾಹನದಲ್ಲಿ ಅಮ್ಮನವರ ಉತ್ಸವ ಬೀದಿವರಿದು ನಡೆಯಿತು ಅಂದು ಸಂಜೆ ಹಂಸವಾಹನದಲ್ಲಿ ಅಮ್ಮನವರು ವೀಣಾಪಾಣಿಯಾಗಿ ನಡೆದು ಬಂದಾಗ ಊರ ಜನಕ್ಕೆ ಸರಸ್ವತಿಯನ್ನು ಪ್ರತ್ಯಕ್ಷವಾಗಿ ಕಂಡ ಅನುಭೂತಿ ಉಂಟಾಯಿತೆನ್ನದೇಕು ನಂತರದ ದಿನ ಬೆಳಗ್ಗೆ ಮುತ್ತಿನ ಚಪ್ಪರದ ವಾಹನದಲ್ಲಿ ಅಮೃತಕಲಶದೊಡನೆ ಊರಿನಲ್ಲಿ ಭಕ್ತರನ್ನು ಅನುಗ್ರಹಿಸುತ್ತ ನಡೆದರು ಅಂದು ಮಧ್ಯಾಹ್ನ ಊಂಜಲ್‌ಸೇವೆಯಲ್ಲಿ ಅಮ್ಮನವರು ಕಾಳೀಯಮರ್ದನ ರೂಪದಲ್ಲಿ ಮೆರೆದರು ಊಂಜಲ್‌ಸೇವೆಯ ನಂತರ ವಾಹನ ಮಂಟಪಕ್ಕೆ ಅಮ್ಮನವರನ್ನು ಕರೆತಂದು ಶಾಂತಲಕ್ಷ್ಮಿ ಅಲಂಕಾರ ಮಾಡಲಾಯಿತು ಇಲ್ಲಿಂದ ಸಿಂಹವಾಹನ ಅಮ್ಮನವರನ್ನು ಊರಮೆರವಣಿಗೆಯಲ್ಲಿ ಕರೆದೊಯ್ದಿತು

ಗುರುವಾರ ಬೆಳಗ್ಗೆ ಅಮ್ಮನವರು ಕೃಷ್ಣರೂಪದಿಂದ ಕಲ್ಪವೃಕ್ಷವಾಹನವನ್ನೇರಿ ಊರಿನಲ್ಲಿ ಮೆರವಣಿಗೆ ಬಂದರು ಅಂದು ಸಂಜೆ ತೋಳಪ್ಪ ಉದ್ಯಾನವನದಲ್ಲಿ ಊಂಜಲ್‌ಸೇವೆಯಾದ ನಂತರ ರಾಮಾವತಾರದಲ್ಲಿ ಹನುಮಂತವಾಹನದಲ್ಲಿ ಹೊರಬಂದು ಅನುಗ್ರಹಿಸಿದರು

ಶುಕ್ರವಾರ ಬೆಳಗ್ಗೆ ಪಲ್ಲಕ್ಕಿ ಉತ್ಸವ ಅಂದು ಸಂಜೆ ಗಜವಾಹನ ಅಮ್ಮನವರ ಅತಿಪ್ರಿಯವಾದ ವಾಹನವೆಂಬ ಪ್ರತೀತಿಯಿಂದಾಗಿ ಗಜವಾಹನವೇರಿದ ಲಕ್ಷ್ಮಿಯು ಗಜಗಮನದಿಂದ ಪುರವೀಧಿಗಳಲ್ಲಿ ಗಮಿಸುವುದನ್ನು ಗಮನಿಸಿ ಧನ್ಯರಾಗಲು ಎಂದಿಗಿಂತ ಹೆಚ್ಚು ಮಂದಿ ಅಂದು ಬರುವರೆಂಬುದು ನಿಶ್ಚಯವಾದ ಮಾತಾಗಿ ಅಂದು ಹೆಚ್ಚಿನ ಜನ ಆಗಮಿಸಿದ್ದರು.





ಶನಿವಾರ ಗರುಡವಾಹನ ಅಂದೂ ಅಸಂಖ್ಯ ಜನ ತಿರುಚಾನೂರಿಗೆ ಆಗಮಿಸಿ, ಗರುಡವಾಹನದಲ್ಲಿ ಊರಮೆರವಣಿಗೆ ಬಂದ ಅಮ್ಮನವರನ್ನು ಅತ್ಯುತ್ಸಾಹ, ಭಕ್ತಿ, ಗೌರವಗಳಿಂದ ಸ್ವಾಗತಿಸಿದರು ಭಾನುವಾರ ಬೆಳಗ್ಗೆ ಸೂರ್ಯಪ್ರಭವಾಹನ ಹಾಗೂ ಅಂದು ಸಂಜೆ ಚಂದ್ರಪ್ರಭವಾಹನಗಳು ಜನರಂಜಕವಾಗಿ ಅಮ್ಮನವರ ವಾಹನಗಳಾದವು.

ಕಾರ್ತೀಕ ಬ್ರಹ್ಮೋತ್ಸವಗಳ ಎಂಟನೆಯ ದಿನ ಸೋಮವಾರ ಬೆಳಗ್ಗೆ ರಥೋತ್ಸವ ಪಡೆಯಿತು ಅಂದು ಬೆಳಗ್ಗೆ 3 ಗಂಟೆಗೇ ಸುಪ್ರಭಾತವಾಗಿ ಅರ್ಚನೆ ಬಲಿಗಳಾದನಂತರ ಪ್ರಾತಃಕಾಲ 5 30 ಗಂಟೆಗೆ ಅಮ್ಮನವರು ರಥಾರೋಹಣ ಮಾಡಿದರು ರಥದಲ್ಲಿ ಅಮ್ಮನವರ ಅಲಂಕರಣವಾದ ಮೇಲೆ ಬೆಳಗ್ಗೆ ಏಳುಗಂಟೆಯ ವೇಳೆಗೆ ರಥ ಮೆರವಣಿಗೆಯನ್ನು ಆರಂಭಿಸಿತು ವೇದ ಘೋಷದ ಪಂಡಿತರು, ಮಂಗಳವಾದ್ಯ ಘೋಷದ, ಕೋಲಾಟ, ಭಜನೆಗಳ ವಿವಿಧ ವಾದ್ಯಗಳ ತಂಡಗಳು ಮುಂದೆ ಮುಂದೆ ದಾರಿ ತೋರುತ್ತ ನಡೆದಿರಲು ಅಮ್ಮನವರು ಬೀದಿವರಿದು ಬಂದರು ಅಂದು ಸಂಜೆ ತಿರುಚ್ಚಿ ಉತ್ಸವ ನಡೆದ ಮೇಲೆ ಊಂಜಲ್ ಸೇವೆಯನ್ನು ನಡೆಸಲಾಯಿತು ನಂತರ ಅಶ್ವವಾಹನೆಯಾದ ಶ್ರೀಪದ್ಮಾವತೀ ದೇವಿಯನ್ನು ಊರಮೆರವಣಿಗೆಯಲ್ಲಿ ಕರೆತರಲಾಯಿತು

ಮಂಗಳವಾರ ತಿರುಚಾನೂರಿನಲ್ಲಿ ಅತ್ಯಂತ ಹೆಚ್ಚಿನ ಜನ. ಕಾರಣ ಅಂದು ಪಂಚಮಿತೀರ್ಥ ಬ್ರಹ್ಮೋತ್ಸವಗಳ ಕಡೆಯದಿನ ಅಂದು ಚಕ್ರಸ್ನಾನ ಧ್ವಜಾವರೋಹಣಗಳ ಕಾರ್ಯಕ್ರಮ ಶ್ರೀ ಪದ್ಮಾವತೀ ಅಮ್ಮನವರಿಗೆ ಬೆಟ್ಟದಿಂದ ಸ್ವಾಮಿ ಮಂಗಳ ದ್ರವ್ಯಗಳನ್ನೂ, ರೇಷ್ಮೆ ವಸ್ತ್ರಗಳನ್ನೂ ಕಳುಹಿಸಿಕೊಡುವಿಕೆ, ಅದನ್ನು ಸ್ವೀಕರಿಸಿದ ಅಮ್ಮನವರಿಗೆ ಪದ್ಮ ಸರೋವರದ ಅವಭೃಥ ಮಂಟಪದಲ್ಲಿ ತಿರುಮಂಜನ ನಡೆಯುವುದು ಅಂದು ಬೆಳಗ್ಗೆ ಅಮ್ಮನವರಿಗೆ ಚೂರ್ಣಾಭಿಷೇಕ ನಡೆಸಿ, ನಾಲ್ಕು ತಿರುವೀಧಿಗಳಲ್ಲಿ ಪಲ್ಲಕ್ಕಿಯಲ್ಲಿ ಮೆರವಣಿಗೆಯಲ್ಲಿ ಬಂದು ಪಂಚಮಿತೀರ್ಥ ಮಂಟಪವನ್ನು ಸೇರಲಾಯಿತು

ತಿರುಮಲೆಯಲ್ಲಿಅಂದು ಬೆಳಗ್ಗೆ ಸ್ವಾಮಿಯ ವಕ್ಷಃಸ್ಥಲ ಲಕ್ಷ್ಮಿಗೆ ಅಭಿಷೇಕವಾದ ಮೇಲೆ, ಸ್ವಾಮಿಯ ವತಿಯಿಂದ ತುಲಸೀಮಾಲೆ, ಹರಿಶಿಣ, ಕುಂಕುಮ, ರೇಷ್ಮೆ ವಸ್ತ್ರಗಳನ್ನು ಆನೆಯ ಮೇಲೆ ಮೆರವಣಿಗೆಯಲ್ಲಿ ತಿರುಚಾನೂರಿಗೆ ತರಲಾಯಿತು ತಿ ತಿ ದೇ ಸಹಕಾರ್ಯನಿರ್ವಹಣಾಧಿಕಾರಿ ಶ್ರೀ ಬಾಲಸುಬ್ರಹ್ಮಣ್ಯಂ ಅವರು ಆನೆಯೊಡನೆಯೇ ನಡೆದು ಬೆಟ್ಟವನ್ನಿಳಿದು ಬಂದಾಗ ತಿರುಚಾನೂರು ಆಲಯದ ಪರವಾಗಿ ಅಲಿಪಿರಿಯಲ್ಲಿ ಆನೆಯನ್ನು ಸ್ವಾಗತಿಸಲಾಯಿತು ತಿ ತಿ ದೇ ಕಾರ್ಯನಿರ್ವಹಣಾಧಿಕಾರಿ ಶ್ರೀ ಎಂ ಕೆ ಆರ್. ವಿನಾಯಕ್ ಮೊದಲಾದವರು ಸ್ವಾಗತಿಸಿದರು ಅಂದು ಪಂಚಮಿತೀರ್ಥ ಸಂದರ್ಭದಲ್ಲಿ ಆಂಧ್ರಪ್ರದೇಶದ ಮುಜರಾಯಿ ಕಮಿಷನರ್ ಶ್ರೀ ಎಸ್ ಎಂ ಬಾಲಸುಬ್ರಹ್ಮಣ್ಯಂ ತಿ ತಿ ದೇ ಸಹಕಾರ್ಯನಿರ್ವಹಣಾಧಿಕಾರಿ ಶ್ರೀ ವೆಂಕಟ್ರಾಮಯ್ಯ ತಿ ತಿ ದೇ ಧರ್ಮಕರ್ತರ ಮಂಡಳಿಯ ಸದಸ್ಯರಾದ ಶ್ರೀ ಡಿ ರಾಮಾನಾಯುಡು, ಶ್ರೀ ಮಹದೇವನಾಯುಡು, ಶ್ರೀ ರಾಧಾಕೃಷ್ಣರಾಜು, ಶ್ರೀ ಎರ್ನೇನಿ ಸೀತಾದೇವಿ, ಶ್ರೀಮತಿ ಈವೂರಿ ಸೀತಾರಾಮಮ್ಮ ಶ್ರೀ ನರಸಿಂಹುಲು, ಡೆ ಇ ಓ ಶ್ರೀ ಲಕ್ಷ್ಮೀಪತಿ, ಸ್ಥಳೀಯ ಎ ಇ ಓ ಶ್ರೀ ಗಿರಿಜಾಪ್ರಸಾದ್ ಮೊದಲಾದವರು ಭಾಗವಹಿಸಿದ್ದರು

ಪಂಚಮಿತೀರ್ಥ ಮಂಟಪದಲ್ಲಿ ಅಮ್ಮನವರಿಗೆ ಸ್ನಪನ ತಿರುಮಂಜನ ಸಂಪನ್ನವಾಯಿತು ಬೆಳಗ್ಗಿನಿಂದಲೇ ತಿರುಚಾನೂರು ಪದ್ಮಸರೋವರದಲ್ಲಿ ಭಕ್ತರು ಚಕ್ರಸ್ನಾನವಾಗುವುದನ್ನು ಕಾಯುತ್ತಿದ್ದರು ಪದ್ಮ ಸರೋವರದಲ್ಲಿ ನೀರು ಕಾಣಿಸದಷ್ಟು ಭಕ್ತರು ನಿಂತಿದ್ದರೆಂದರೆ ಅತಿಶಯೋಕ್ತಿಯಲ್ಲ ಚಕ್ರಸ್ನಾನವಾಗುತ್ತಿದ್ದಂತೆಯೇ ಭಕ್ತರೂ ನೀರಿನಲ್ಲಿ ಮುಳುಗಿ ಸ್ನಾನ ಮಾಡಿ ಧನ್ಯತೆಯನ್ನು ಪಡೆದರು

ಅಂದು ಮಧ್ಯಾಹ್ನ ಅಮ್ಮನವರನ್ನು ಗಂಗುಡ್ರ ಮಂಟಪಕ್ಕೆ ಕರೆತಂದು ಅಂದು ರಾತ್ರಿ ತಿರುವೀಧಿಗಳಲ್ಲಿ ಮೆರವಣಿಗೆಯಲ್ಲಿ ಕರೆತರಲಾಯಿತು ನಂತರ ಅಮ್ಮನವರು ಆಲಯವನ್ನು ಸೇರಿದರು

ತಿರುಚಾನೂರಿನ ಬ್ರಹ್ಮೋತ್ಸವಗಳ ಯಶಸ್ವಿ ಆಚರಣೆಯಲ್ಲಿ ಹಗಲು ರಾತ್ರಿ ತಮ್ಮನ್ನು ತಾವು ತೊಡಗಿಸಿಕೊಂಡು ಕೆಲಸ ಮಾಡಿದ ಉನ್ನತಾಧಿಕಾರಿಗಳನ್ನು ತಿ ತಿ ದೇ ಕಾರ್ಯನಿರ್ವಹಣಾಧಿಕಾರಿಯವರು ಸನ್ಮಾನಿಸಿದರು


ಅನಂತಪುರಂ ಜಿಲ್ಲ ಮುಲಕಲಚೆರುವುನಲ್ಲಿ ನವಂಬರ್ 5 ರಂದು
ಆಂಧ್ರ ಪ್ರದೇಶದ ಮಂತ್ರಿವರ್ಯರು ಶ್ರೀ ಬಿ ಗೋಪಾಲಕೃಷ್ಣಾರೆಡ್ಡಿ ಅವರು
ತಿ ತಿ ದೇ ಕಲ್ಯಾಣಮಂಟಪವನ್ನು ಉದ್ಘಾಟಿಸಿದರು

## ಶ್ರೀಮತಿ ಮಸ್ತಾನಮ್ಮ ಅವರ

## ಪದವಿ ವಿರಮಣ



ತಿ ತಿ ದೇವಸ್ಥಾನಗಳ ಮುದ್ರಣಾಲಯದಲ್ಲಿ ಪ್ರೂಫ್ ಕರೆಕ್ಟರ್ ಆಗಿ 25 ವರ್ಷಕ್ಕೂ ಹೆಚ್ಚುಕಾಲ ಯಶಸ್ವಿಯಾಗಿ ಕಾರ್ಯನಿರ್ವಹಿಸಿದ ಶ್ರೀಮತಿ ಮಸ್ತಾನಮ್ಮ ಅವರು ಆರೋಗ್ಯ ಕಾರಣಗಳಿಂದಾಗಿ ಐಚ್ಛಿಕವಾಗಿ ಪದವಿ ವಿರಮಣ ಮಾಡಿದ್ದಾರೆ

ಬಹುಭಾಷಾ ಪಾರಂಗತರಾಗಿ, ಮುದ್ರಣರಂಗದ ಸುಳಿವು ಸೂಕ್ಷ್ಮಗಳನ್ನು ತಿಳಿದಿದ್ದ ಶ್ರೀಮತಿ ಮಸ್ತಾನಮ್ಮನವರು ಕಳೆದ ಇಪ್ಪತ್ತೆಂಟು ವರ್ಷಗಳಿಂದ ಹೊರಬಂದ ಎಲ್ಲ ಪುಸ್ತಕಗಳನ್ನೂ ಓದಿದ್ದರು ಎಂದರೆ ಅತಿಶಯೋಕ್ತಿ ಅಲ್ಲ ಅವರ ಸೇವೆ ತಿ ತಿ ದೇ ಪಂಚಾಂಗ, ಸಪ್ತಗಿರಿ, ಭಗವದ್ಗೀತೆ ಮೊದಲಾದವುಗಳಲ್ಲಿ ಪ್ರಧಾನವಾಗಿದ್ದಿತು

5-12-98 ರಂದು ಪದವಿ ವಿರಮಣ ಮಾಡಿದ ಅವರ ವಿಶ್ರಾಂತಜೀವನ ಸುಖ ಶಾಂತಿಗಳಿಂದ ಕೂಡಿರಲೆಂದು ಸಪ್ತಗಿರಿ - ತಿ ತಿ ದೇ ಮುದ್ರಣಾಲಯ ಹಾರೈಸುತ್ತದೆ

## ತಿ.ತಿ.ದೇ. ಕ್ಯಾಲೆಂಡರ್ ಬಿಡುಗಡೆ

ನವಂಬರ್ 25 ರಂದು ಬುಧವಾರದಂದು ತಿರುಮಲೆಯ ಆಲಯದಲ್ಲಿ ತಿ ತಿ ದೇ ಗಳ 1999 ರ ಕ್ಯಾಲೆಂಡರುಗಳು ಬಿಡುಗಡೆ ಮಾಡಲ್ಪಟ್ಟವು. ಈ ಬಗ್ಗೆ ತಿ ತಿ ದೇ ಪೌರಸಂಬಂಧಾಧಿಕಾರಿ ಶ್ರೀ ಸುಭಾಷ್‌ಗೌಡ್ ಅವರು ಕ್ಯಾಲೆಂಡರುಗಳ ವೈವಿಧ್ಯವನ್ನು ಕುರಿತು ಹೇಳುತ್ತ ಶ್ರೀ ವೆಂಕಟೇಶ್ವರಸ್ವಾಮಿ ಶ್ರೀ ಪದ್ಮಾವತೀ ಅಮ್ಮನವರ ಚಿತ್ರಗಳಿರುವ ಕ್ಯಾಲೆಂಡರು 2 5 ಲಕ್ಷ ಪ್ರತಿಗಳು, ದೊಡ್ಡ ಗಾತ್ರದ ಶ್ರೀ ವೆಂಕಟೇಶ್ವರ ಸ್ವಾಮಿ ಚಿತ್ರವಿರುವುದು 1 ಲಕ್ಷ ಪ್ರತಿಗಳನ್ನು ಮುದ್ರಿಸಲಾಗಿದೆ ಎಂದೂ, ಹನ್ನೆರಡು ಪುಟಗಳ ಕ್ಯಾಲೆಂಡರುಗಳು 25000 ಸಂಖ್ಯೆಯಲ್ಲಿ ಮುದ್ರಿಸಲಾಗಿದೆಯೆಂದೂ ತಿಳಿಸಿದ್ದಾರೆ ಜೊತೆಗೇ ಶುಭಾಶಯದ ಕಾರ್ಡುಗಳನ್ನು ಒಂದು ಲಕ್ಷದಷ್ಟು ಮುದ್ರಿಸಲಾಗಿದೆ

ತಿ ತಿ ದೇ ಕಾರ್ಯನಿರ್ವಹಣಾಧಿಕಾರಿ ಶ್ರೀ ಎಂ ಕೆ ಆರ್ ವಿನಾಯಕ್ ಅವರು ಕ್ಯಾಲೆಂಡರುಗಳನ್ನು ಬಿಡುಗಡೆ ಮಾಡಿದರು ತತ್ಸಂದರ್ಭದಲ್ಲಿ ತಿ ತಿ ದೇ ಆಸ್ಥಾನವಿದ್ವಾಂಸ ಶ್ರೀ ಮಾಡಂಬಾಕಂ ಶ್ರೀನಿವಾಸಾಚಾರ್ಯರೂ, ಸಪ್ತಗಿರಿ ಸಂಪಾದಕ ಶ್ರೀ ಎನ್ ಎಸ್ ರಾಮಮೂರ್ತಿ ಅವರೂ ಹಾಜರಿದ್ದರು

ವರದಿ - ಬಿ ಎನ್ ಎಸ್

## ಅಮ್ಮನವರ ವಜ್ರಕಿರೀಟ ಮೂಲ ರೂಪ ತಯಾರಕರಿಗೆ ಸನ್ಮಾನ

ಶ್ರೀ ಪದ್ಮಾವತೀ ಅಮ್ಮನವರಿಗಾಗಿ ತಿ ತಿ ದೇ ಗಳು ತಯಾರಿಸುತ್ತಿರುವ ವಜ್ರಕಿರೀಟದ ಮೂಲ ರೂಪದ ಚಿನ್ನದ ರೇಕಿನ ಕಿರೀಟವನ್ನು ತಿ ತಿ ದೇ ವರ್ಕ್‌ಷಾಪಿನಲ್ಲಿ ಮೆಕ್ಯಾನಿಕಲ್ ಟರ್ನರ್ ಆಗಿ ಕೆಲಸಮಾಡುತ್ತಿರುವ ಇಬ್ಬರು ಉದ್ಯೋಗಿಗಳು ತಮ್ಮ ಸಲಕರಣೆಗಳಿಂದಲೇ ಲೇತ್‌ಯಂತ್ರ ಹಾಗೂ ಮತ್ತಿತರ ಟರ್ನಿಂಗ್ ಪರಿಕರಗಳ ಸಹಾಯದಿಂದ ತಯಾರಿಸಿ ನೀಡಿದ್ದಾರೆ ಈಗ ಈ ಕಿರೀಟದ ಹೊರ ಆವರಣದಲ್ಲಿ ವಜ್ರಗಳನ್ನು ಹುದುಗಿಸುವ ಕೆಲಸ ನಡೆದಿದೆ ಚಿನ್ನದ ವೇಸ್ಟೇಜ್ ಅತಿಕಡಿಮೆ ಎಂದು ಅಂದಾಜಿಸಲಾಗಿರುವ ಈ ಚಿನ್ನದ ಕಿರೀಟ ಮೂಲ ರೂಪವನ್ನು ತಯಾರಿಸಿದ ಉದ್ಯೋಗಿಗಳನ್ನು - ಶ್ರೀ ಎನ್ ಶಿವಾನಂದರೆಡ್ಡಿ ಹಾಗೂ ಶ್ರೀ ಜಿ ನರಸಿಂಹುಲುನಾಯುಡು - ಅವರುಗಳನ್ನು ನವಂಬರ್ 23 ರಂದು ತಿರುಮಲೆಯಲ್ಲಿ ನಡೆದ ತಿ ತಿ ದೇ ಧರ್ಮಕರ್ತರ ಮಂಡಳಿಯ ಸಮಾವೇಶದಲ್ಲಿ ಸತ್ಕರಿಸಲಾಯಿತು ಶ್ರೀ ವೆಂಕಟೇಶ್ವರ ಸ್ವಾಮಿ ಹಾಗೂ ಶ್ರೀ ಪದ್ಮಾವತೀ



ಅಮ್ಮನವರ ಚಿತ್ರವಿರುವ ಐದುಗ್ರಾಂ ಚಿನ್ನದ ಪದಕಗಳನ್ನು ಇಬ್ಬರಿಗೂ ನೀಡಿದ ಆಂಧ್ರಪ್ರದೇಶ ದೇವಾದಾಯ ಇಲಾಖಾ ಕಮಿಷನರ್ ಶ್ರೀ ಬಾಲಸುಬ್ರಹ್ಮಣ್ಯಂ ಅವರು ಉದ್ಯೋಗಿಗಳ ಭಕ್ತಿಯನ್ನೂ ಕಲಾವಂತಿಕೆಯನ್ನೂ ಪ್ರಶಂಸಿದರು

## ತಿ.ತಿ.ದೇ. ಧರ್ಮಕರ್ತಮಂಡಳಿಯ ತೀರ್ಮಾನಗಳು

ತಿರುಮಲೆಯ ಕಾಲುಹಾದಿಯಲ್ಲಿ ಅಲಿಪಿರಿಯಿಂದ ಗರುಡಾದ್ರಿ ನಗರದವರೆಗೆ 75 ಲಕ್ಷ ರೂಪಾಯಿಗಳ ವೆಚ್ಚದಲ್ಲಿ ಎರಡನೇ ನೀರಿನ ಕೊಳವೆ ಸಾಲನ್ನು ಹಾಕಿಸಲಾಗುವುದು

ನವಂಬರ್ 23 ರಂದು ಸೋಮವಾರ ತಿರುಮಲೆಯಲ್ಲಿ ನಡೆದ ತಿ ತಿ ದೇ ಧರ್ಮಕರ್ತರ ಮಂಡಳಿಯ ಸದಸ್ಯರ ಸಮಾವೇಶದಲ್ಲಿ ತೆಗೆದುಕೊಳ್ಳಲಾದ ನಿರ್ಣಯಗಳ ಬಗ್ಗೆ ತಿ ತಿ ದೇ ಪೌರಸಂಬಂಧಾಧಿಕಾರಿ ಶ್ರೀ ಸುಭಾಷ್‌ಗೌಡ್ ಅವರು ಪತ್ರಕರ್ತರಿಗೆ ತಿಳಿಸುತ್ತ ಮೇಲಿನ ನಿರ್ಣಯವನ್ನು ಕುರಿತು ಹೇಳಿದರು

ಕಾಲುಹಾದಿಯಲ್ಲಿ ಈಗಾಗಲೇ ಒಂದು ಸಾಲು ನೀರಿನ ಕೊಳವೆಯಿರುವುದಾದರೂ, ಕುಡಿಯುವ ನೀರಿನ ಆಪೂರ್ತಿಗಾಗಿ ಇನ್ನೊಂದು ಸಾಲು ನೀರಿನ ಕೊಳವೆಯನ್ನು ಹಾಕಿಸಲು ತೀರ್ಮಾನಿಸಲಾಗಿದೆ

ಶ್ರೀ ವೆಂಕಟೇಶ್ವರ ವೈದ್ಯ ವಿಜ್ಞಾನ ಸಂಸ್ಥೆ (ಸ್ವಿಮ್ಸ್)ಯ ಶ್ರೀ ಬಾಲಾಜೀ ಆರೋಗ್ಯ ವರ ಪ್ರಸಾದಿನೀ ಯೋಜನೆಗೆ ನೀಡಲಾಗುತ್ತಿರುವ ಮ್ಯಾಚಿಂಗ್ ಗ್ರಾಂಟ್ ಅನ್ನು ಆರು ಕೋಟಿ ರೂಪಾ



ಬಾಲಾಡ ಏಕಲಿಂಗ ರಸ್ಪತ್ರಿಯಲ್ಲಿನ ಎರಡು ಹುದ್ದೆಗಳನ್ನು ತುಂಬಿಸಲು ತೀರ್ಮಾನಿಸಲಾಯಿತು

ಮುಜರಾಯಿ ಇಲಾಖಾ ಕಮಿಷನರ್ ಶ್ರೀ ಬಾಲಸುಬ್ರಹ್ಮಣ್ಯಂ ಅವರ ಅಧ್ಯಕ್ಷತೆಯಲ್ಲಿ ನಡೆದ ಈ ಸಮಾವೇಶದಲ್ಲಿ ತಿ ತಿ ದೇ ಕಾರ್ಯನಿರ್ವಹಣಾಧಿಕಾರಿ ಶ್ರೀ ಎಂ ಕೆ ಆರ್ ವಿನಾಯಕ್, ಧರ್ಮಕರ್ತರ ಮಂಡಳಿಯ ಸದಸ್ಯರಾದ ಶ್ರೀ ಮಹದೇವನಾಯುಡು, ಶ್ರೀ ರಾಮಾನಾಯುಡು, ಶ್ರೀ ಮನೋಜ ಕುಮಾರ್ ಸಂತಾಲಿಯಾ, ಶ್ರೀ ನರಸಿಂಹುಲು ಮೊದಲಾದವರು ಭಾಗವಹಿಸಿದ್ದರು



ಭಾರತಾದ್ಯಂತ ಡಿಸೆಂಬರ್ 6 ರಂದು ನಡೆದ ಪಲ್ಸ್ ಪೋಲಿಯೋ ಕಾರ್ಯಕ್ರಮದಲ್ಲಿ ತಿ.ತಿ.ದೇ. ಆರೋಗ್ಯ ವಿಭಾಗವೂ ಭಾಗವಹಿಸಿದ್ದಿತು. ಅಂದು ಎಳೆಯ ಮಕ್ಕಳಿಗೆ ಪೋಲಿಯೋ ನಿರೋಧಕ ಔಷಧಿಯ ತೊಟ್ಟುಗಳನ್ನು ನೀಡುವ ನೋಟ

ಯಿಗಳಿಂದ ಏಳು ಕೋಟಿ ರೂಪಾಯಿಗಳಿಗೇರಿಸಲು ತೀರ್ಮಾನಿಸಲಾಗಿದೆ

ಮೈಸೂರಿನ ಅವಧೂತ ದತ್ತಪೀಠದ ಆಶ್ರಯದಲ್ಲಿ ನಡೆಯುತ್ತಿರುವ ವೇದಪಾಠಶಾಲೆಗೆ ವಾರ್ಷಿಕವಾಗಿ ನೀಡುತ್ತಿದ್ದ 1.5 ಲಕ್ಷ ರೂಪಾಯಿಗಳ ವಿರಾಳವನ್ನು 2.5 ಲಕ್ಷ ರೂಪಾಯಿಗಳಿಗೇರಿಸಲು ತೀರ್ಮಾನಿಸಲಾಗಿದೆ

ಅಲಿಪಿರಿಯಿಂದ ಚಿತ್ತೂರು ಬಳಸುರಸ್ತೆಯ ಆರು ಕಿಲೋಮೀಟರ್ ರಸ್ತೆಯನ್ನು 18 ಕೋಟಿ ರೂಪಾಯಿ ವೆಚ್ಚದಲ್ಲಿ ಅಭಿವೃದ್ಧಿಗೊಳಿಸಲು ತೀರ್ಮಾನಿಸಲಾಗಿದೆ

ತಿರುಮಲೆಯಲ್ಲಿ ಉದ್ಯಾನವನ ಶಾಖೆಯಿಂದ ಮೇದರಮಿಟ್ಟದವರೆಗಿನ ರಸ್ತೆಯಲ್ಲಿ ತಾರು ರಸ್ತೆ, ಫುಟ್ಪಥವನ್ನು ನಿರ್ಮಿಸಲು 38 ಲಕ್ಷ ರೂಗಳ ವೆಚ್ಚ ಮಾಡಲು ತೀರ್ಮಾನಿಸಲಾಗಿದೆ

ಕಾರ್ವೇಟಿನಗರದ ಶ್ರೀ ವೇಣುಗೋಪಾಲ ಸ್ವಾಮಿ ಆಲಯದ ಧ್ವಜಸ್ತಂಭವನ್ನು ಒಂದು ಲಕ್ಷ ರೂಪಾಯಿ ವೆಚ್ಚದಿಂದ ನೂತನಗೊಳಿಸಬೇಕೆಂದು ತೀರ್ಮಾನಿಸಲಾಗಿದೆ

ಗೀತಾ ಮಂದಿರ ನಿರ್ಮಾಣಗಳಿಗೆ ವೆಚ್ಚದಲ್ಲಿ ಐವತ್ತು ಶತಾಂಶ ಅಥವಾ ಮೂರು ಲಕ್ಷ ರೂಪಾಯಿಗಳ ವಂತಿಗೆ ನೀಡಲು ತೀರ್ಮಾನಿಸಲಾಯಿತು

## ಸ್ವಾಮಿ ಸೇವೆಯಲ್ಲಿ ಅಜ್ಞಾತ ಭಕ್ತರ ಆರುಲಕ್ಷ ಕಾಣಿಕೆ

ತಿರುಮಲೆಯ ಶ್ರೀ ವೆಂಕಟೇಶ್ವರಸ್ವಾಮಿಗೆ ಅಜ್ಞಾತಭಕ್ತರೊಬ್ಬರು ಆರು ಲಕ್ಷ ರೂಪಾಯಿಗಳ ಕಾಣಿಕೆಯನ್ನು ಸಮರ್ಪಿಸಿದ್ದಾರೆ ನವಂಬರ್ 22 ರಂದು ಭಾನುವಾರ ಪರಕಾಮಣಿಯಲ್ಲಿ ಹುಂಡಿಯ ಕಾಣಿಕೆಗಳನ್ನು ಎಣಿಸುವಾಗ - ಈ ಸಂಗತಿ ಬೆಳಕಿಗೆ ಬಂದಿದೆ

ಭಾನುವಾರದಂದು ಒಟ್ಟು ಹುಂಡಿಯ ಕಾಣಿಕೆ ಮೂವತ್ತೇಳು ಲಕ್ಷ ರೂಪಾಯಿಗಳಾಗಿದ್ದು ಇದರಲ್ಲಿ ಐದುನೂರು ರೂಪಾಯಿಗಳ ಹನ್ನೆರಡು ಕಟ್ಟುಗಳನ್ನು ಕಾಣಲಾಗಿದ್ದು, ಈ ಹನ್ನೆರಡೂ ಕಟ್ಟುಗಳೂ ಒಂದೇ ಬಂಡಲ್‌ನಲ್ಲಿ ಬಂಧಿತವಾಗಿದ್ದಿತು ಎಂಬುದನ್ನು ಗುರುತಿಸಲಾಗಿದೆ



ಬ್ರಹ್ಮೋತ್ಸವದಲ್ಲಿ ಶ್ರಮಿಸಿ ಕಾರ್ಯನಿರ್ವಹಣಾಧಿಕಾರಿಗಳಿಂದ ಸನ್ಮಾನಿತರಾದ ತಿ ತಿ ದೇ ಅಧಿಕಾರಿಗಳು-
ಚೀಫ್ ಇಂಜನೀಯರ್ ಶ್ರೀ ಮುನಿರೆಡ್ಡಿ, ಜೆ ಇ ಓ. ಶ್ರೀ ವೆಂಕಟ್ರಾಮಯ್ಯ, ಸಂರಕ್ಷಣಾಧಿಕಾರಿ ಶ್ರೀ ವಿಜಯಕುಮಾರ್, ಪಿ ಆರ್ ಓ ಶ್ರೀ ಸುಬಾಷ್‌ಗೌಡ್

Edited and Published on behalf of T T Devasthanams by N S Rama Murthy, M A, and Printed at T T D Press
by M Lakshmana Rao, B A, L P T, Manager, T T D Press, Tirupati - 517 507



# ತಿರುಮಲೆ - ತಿರುಪತಿ ದೇವಾಲಯಗಳು - ತಿರುಪತಿ
# ತಿರುಮಲೆಯ ಶ್ರೀ ವೆಂಕಟೇಶ್ವರಸ್ವಾಮಿ ಆಲಯದ ಆರ್ಜಿತ ಸೇವೆಗಳು

| ಕ್ರ ಸಂ | ಸೇವೆ/ಉತ್ಸವ | ಪ್ರವೇಶಾವಕಾಶ | ಪ್ರಸಾದ / ಬಹುಮಾನ | ಕಾಲ | ದಿನ | ಸೇವಾಶುಲ್ಕ ಪ್ರತಿ ಟಿಕೆಟ್ಟಿಗೆ. |
|---|---|---|---|---|---|---|
| 1 | ಸುಪ್ರಭಾತ | ಒಬ್ಬರಿಗೆ | ಎರಡು ಕಿರಿಯ ಲಾಡು | ಬೆ-3-00 | ಪ್ರತಿದಿನ | ರೂ 120/- |
| 2. | ತೋಮಾಲೆಸೇವೆ | ಒಬ್ಬರಿಗೆ | ಎರಡು ಕಿರಿಯಲಾಡು | ಬೆ-3 30-4 30 | ಪ್ರತಿದಿನ | ರೂ.220/- |
| 3 | ಅರ್ಚನೆ | ಒಬ್ಬರಿಗೆ | ಎರಡು ಕಿರಿಯಲಾಡು | ಬೆ-4 30-5 30 | ಪ್ರತಿದಿನ | ರೂ.220/- |
| 4 | ಏಕಾಂತಸೇವೆ | ಒಬ್ಬರಿಗೆ | ಎರಡು ಕಿರಿಯಲಾಡು | ರಾ-10 30 ನಂತರ | ಪ್ರತಿದಿನ | ರೂ 120/- |
| 5 | ಕಲ್ಯಾಣೋತ್ಸವ | ಐವರಿಗೆ | 5 ಲಾಡು (ದೊಡ್ಡವು) 5 ವಡೆ, 5 ದೋಸೆ, ಪುಳಿಯೋಗರೆ, ದದ್ಧ್ಯೋದನ, ಸಕ್ಕರೆಪೊಂಗಲು ಪೊಂಗಲು ( $\frac{1}{16}$ ಸೋಲ) | ಬೆ-10-00 | ಪ್ರತಿದಿನ | ರೂ 2500/- |
| 6 | ಪ್ರತ್ಯೇಕ ಕಲ್ಯಾಣೋತ್ಸವ | ಇಬ್ಬರಿಗೆ | ಒಂದುಲಾಡು (ದೊಡ್ಡದು), ಒಂದುವಡೆ | ಬೆ-10-00 | ಪ್ರತಿದಿನ | ರೂ 750/- |
| 7 | ಆರ್ಜಿತಬ್ರಹ್ಮೋತ್ಸವ | ಐವರಿಗೆ | ಒಂದು ಉತ್ತರೀಯ | ಮ-1-00 | ಪ್ರತಿದಿನ | ರೂ 500/- |
| 8 | ಡೋಲೋತ್ಸವ | ಆರುಮಂದಿಗೆ | ಒಂದು ಶೇಷವಸ್ತ್ರ, ಒಂದು ಕುಪ್ಪಸದ ಕಣ | ಮ-1-30 | ಪ್ರತಿದಿನ | ರೂ 750/- |
| 9 | ಅರ್ಚನಾನಂತರದರ್ಶನ | ಒಬ್ಬರಿಗೆ | ಒಂದು ಕಿರಿಯಲಾಡು | ಬೆ-5-00 | ಶುಕ್ರವಾರಹೊರತು | ರೂ 100/- |
| 10 | ಅಮಂತ್ರಣೋತ್ಸವ | ಒಬ್ಬರಿಗೆ | ಎರಡು ಕಿರಿಯಲಾಡು | ಬೆ-3 30 | ಶುಕ್ರವಾರಹೊರತು | ರೂ 620/- |
| 11 | ತೋಮಾಲೆಸೇವೆ ಹಾಗೂ ಅರ್ಚನೆ | ಒಬ್ಬರಿಗೆ | ಎರಡು ಕಿರಿಯಲಾಡು | ಬೆ-6-30 | ಶುಕ್ರವಾರಗಳಲ್ಲಿ ಮಾತ್ರ | ರೂ 420/- |
| 12 | ಸಹಸ್ರದೀಪಾಲಂಕಾರಸೇವೆ | ಐವರಿಗೆ | ವಸ್ತ್ರ | ಸಂ-5 30 ನಂತರ | ಪ್ರತಿದಿನ | ರೂ 500/- |
| **ವಾರ ಸೇವೆಗಳು** | | | | | | |
| 1 | ವಿಶೇಷಪೂಜೆ | ಐವರಿಗೆ | 5 ದೊಡ್ಡಲಾಡು 5 ವಡೆ | ಬೆ-6-00 | ಸೋಮವಾರ | ರೂ 3000/- |
| 2 | ಅಷ್ಟದಳಪಾದ ಪದ್ಮಾರಾದನ | ಐವರಿಗೆ | 10ದೊಡ್ಡಲಾಡು 10 ವಡೆ | ಬೆ-6 30 | ಮಂಗಳವಾರ | ರೂ 3500/- |
| 3 | ಸಹಸ್ರಕಲಶಾಬಿಷೇಕ | ಆರು ಮಂದಿಗೆ | 7ದೊಡ್ಡಲಾಡು, 7 ವಡೆ, 7 ಅಪ್ಪ, 5 ದೋಸೆ, ದದ್ಧ್ಯೋದನ, ಪುಳಿಯೋಗರೆ, ಸಕ್ಕರೆ ಪೊಂಗಲ್, ಪಾಯಸ | ಬೆ-5 30 | ಬುಧವಾರ | ರೂ 5000/- |
| 4 | ತಿರುಪ್ಪಾವಡಾಸೇವೆ | ಆರು ಮಂದಿಗೆ | 7ದೊಡ್ಡಲಾಡು, 7 ವಡೆ, 7 ಅಪ್ಪ, 5 ಜಲೇಬಿ, ದಧ್ಯೋದನ, ಪುಳಿಯೋಗರೆ, ಸಕ್ಕರೆ ಪೊಂಗಲ್, ಪಾಯಸ | ಬೆ-5 30 | ಗುರುವಾರ | ರೂ 5000/- |
| **ಅಬಿಷೇಕ ಸೇವೆಗಳು** | | | | | | |
| 5 | ಪೂರಾಬಿಷೇಕ | ಒಬ್ಬರಿಗೆ | 2 ವಡೆ, 2 ಕಿರಿಯಲಾಡು | ಬೆ-3 30 | ಶುಕ್ರವಾರ | ರೂ 750/- |
| 6 | ಪುನುಗುಬಟ್ಟಲು | ಒಬ್ಬರಿಗೆ | 1 ವಡೆ, 1 ಕಿರಿಯಲಾಡು | ಬೆ-3 30 | ಶುಕ್ರವಾರ | ರೂ 300/- |
| 7 | ಕಸ್ತೂರಿಬಟ್ಟಲು | ಒಬ್ಬರಿಗೆ | 1 ವಡೆ, 1 ಕಿರಿಯಲಾಡು | ಬೆ-3 30 | ಶುಕ್ರವಾರ | ರೂ 150/- |
| 8 | ನಿಜಪಾದ ದರ್ಶನ | ಒಬ್ಬರಿಗೆ | 1 ಕಿರಿಯಲಾಡು | ಬೆ-5 30 | ಶುಕ್ರವಾರ | ರೂ 100/- |
| 9 | ವಸ್ತ್ರಾಲಂಕಾರಸೇವೆ | ಇಬ್ಬರಿಗೆ (ದಂಪತಿಗಳು) | ಎರಡು ದೊಡ್ಡಲಾಡು, ಎರಡು ವಡೆ | ಬೆ-3 30 | ಶುಕ್ರವಾರ | ರೂ 12250/- |
| **ಕಾಲಿಕ ಸೇವೆಗಳು** | | | | | | |
| 1 | ವಸಂತೋತ್ಸವ | ಹತ್ತು ಮಂದಿಗೆ | 20 ದೋಸೆ 6 ವಡೆ ಮತ್ತಿತರ ಅನ್ನಪ್ರಸಾದಗಳು | ಮ-2-00 | ಏಪ್ರಿಲ್ | ರೂ 3000/- |
| 2 | ಪದ್ಮಾವತೀಪರಿಣಯ | ಐದುಮಂದಿಗೆ | 5 ದೊಡ್ಡಲಾಡು 5 ವಡೆ | ಮ-3-00 | ಮೇ | ರೂ 5000/ |
| 3 | ಅಬಿದ್ಯೇಕಅಬಿಷೇಕ | ಐದುಮಂದಿಗೆ | 1 ದೊಡ್ಡಲಾಡು 1 ವಡೆ | ಬೆ-8-00 | ಜೂನ್ | ರೂ 2000/- |
| 4 | ಪುಷ್ಪಪಲ್ಲಕ್ಕಿ | ಐದು ಮಂದಿಗೆ | 1 ಲಾಡು 1 ವಡೆ | ಸಂ-5-30 | ಜುಲೈ | ರೂ 1000/- |
| 5 | ಪವಿತ್ರೋತ್ಸವ | ಐವರಿಗೆ | ಎರಡನೇ ದಿನ - 30 ದೋಸೆ, ಪೊಂಗಲು<br>ಮೂರನೇ ದಿನ - 30 ದೋಸೆ, ಪೊಂಗಲು | ಬೆ-8-00 | ಆಗಸ್ಟ್ | ರೂ 7500/- |
| 6 | ಪುಷ್ಪಯಾಗ | ಐದುಮಂದಿಗೆ | 1 ದೊಡ್ಡಲಾಡು 1 ವಡೆ | ಬೆ-6-00 | ನವಂಬರ್ | ರೂ 3500/- |
| 7 | ಕೋಯಿಲ್ ಆಳ್ವಾರ್ ತಿರುಮಂಜನ | ಹತ್ತುಮಂದಿಗೆ | 15 ದೊಡ್ಡಲಾಡು, 15 ವಡೆ, 10 ಅಪ್ಪ, 10 ದೋಸೆ, ದಧ್ಯೋದನ, ಪುಳಿಯೋಗರೆ, ಸಕ್ಕರೆ ಪೊಂಗಲ್ | ಬೆ-11-00 | ವರ್ಷದಲ್ಲಿ ನಾಲ್ಕುಬಾರಿ | ರೂ 3000/- |
| | (ಯುಗಾದಿ, ಆನಿವರ ಆಸ್ಥಾನ, ಬ್ರಹ್ಮೋತ್ಸವ, ವೈಕುಂಠ ಏಕಾದಶಿಗಳ ಮೊದಲಿನ ಮಂಗಳವಾರಗಳಲ್ಲಿ) | | | | | |
| 8 | ತೆಪ್ಪೋತ್ಸವ | ಐದು ಮಂದಿಗೆ | ಉತ್ತರೀಯ, ಕುಪ್ಪಸದ ಕಣ | ಸಂ-6-00 | ವರ್ಷಕ್ಕೆ ಐದುದಿನ | ದಿನಕ್ಕೆ ರೂ 2500/- |

ಕಾರ್ಯನಿರ್ವಹಣಾದಿಕಾರಿ, ತಿ ತಿ ದೇ , ತಿರುಪತಿ ಇವರ ಹೆಸರಿಗೆ ಕನಿಷ್ಠ 3 ತಿಂಗಳ ಮೊದಲು ಬ್ಯಾಂಕ್ ಡಿ. ಡಿ. ಕಳುಹಿಸುವ ಮೂಲಕ ಸೇವಾ ಟಿಕೆಟ್ಟನ್ನು ಕಾಯ್ದಿರಿಸಬಹುದು ದೂರವಾಣಿ 79277

